ಮೊದಲನೆಯ ಮುದ್ರಣ: ೧೯೫೯



Published by
Kavyalaya Publishers, Mysore

*This is an abridged Kannada version of MAHADEV GOVIND RANADE by James Kellock and is Published by kind permission of the Y. M. C. A. Publishing House.*

ಬೆಲೆ: ರೂ. ೧-೭೫ (೩-೨೫)

ಮುದ್ರಕರು: [illegible]
ಶ್ರೀ ಶಕ್ತಿ ಎಲೆಕ್ಟ್ರ[illegible]
ಕೃಷ್ಣಮೂರ್ತಿಪುರಂ, ಮೈಸೂರು.

# ಪೀಠಿಕೆ

೧೯೦೨ ರಲ್ಲಿ ರಾವ್ ಬಹಾದೂರ್ ಜಿ. ಎ. ಮಾಂಕರ್ ಅವರು —A Sketch of the life and works of the late Mr. Justice M. G. Ranade—ಎಂಬ ಹೆಸರುಳ್ಳ ರಾನಡೆಯವರ ಒಂದು ಚರಿತ್ರೆಯನ್ನು ಪ್ರಕಟಿಸಿದರು. ೧೯೧೦ ರಲ್ಲಿ ಶ್ರೀಮತಿ ರಮಾಬಾಯಿ ರಾನಡೆಯವರು ತಮ್ಮ " ನೆನಪುಗಳ "ನ್ನು—ಆಮುಚ್ಯಾ ಆಯುಷ್ಯಾಂತೀಲ ಕಾಂಹೀ ಆಠವಣೀ—ಎಂಬ ಗ್ರಂಥದಲ್ಲಿ ವಿವರಿಸಿದರು. ಅದರಲ್ಲಿ ಅವರ ಪತಿಯ ವೈಯಕ್ತಿಕ ಜೀವನದ ಬಗೆಗೆ ಮುಖ್ಯವಾದ ಅನೇಕ ವಿಷಯ ಗಳಿವೆ. ೧೯೨೪ ರಲ್ಲಿ ಶ್ರೀಯುತ ಎನ್. ಆರ್ ಫಾಟಕರ—ನ್ಯಾಯ ಮೂರ್ತಿ ಮಹಾದೇವ ಗೋವಿಂದ ರಾನಡೆ ಯಾಂಚೆ ಚರಿತ್ರ-ಎಂಬ ವಿಸ್ತಾರ ವಾದ ಗ್ರಂಥ ಹೊರಬಿದ್ದಿತು. ಈ ಮೂರು ಗ್ರಂಥಗಳಿಗೂ ನಾನು ಋಣಿ ಯಾಗಿದ್ದೇನೆ. ರಾನಡೆಯವರ ಜೀವನದ ಸಂಗತಿಗಳನ್ನು ನಾನು ಮುಖ್ಯ ವಾದ ಈ ಗಣಿಗಳಿಂದ ಅಗೆದು ತೆಗೆದಿದ್ದೇನೆ. ಇವುಗಳಲ್ಲದೆ ಇನ್ನು ಕೆಲವು ಮೂಲಗಳಿಂದಲೂ ವಿಷಯವನ್ನು ಆರಿಸಿದ್ದೇನೆ. ಶ್ರೀ ವಿ.ವಿ. ಥಾಕೂರರ ಒಂದು ಲೇಖನ (ವಿವಿಧ ಜ್ಞಾನ ವಿಸ್ತಾರ ಪತ್ರಿಕೆಯ ೧೯೧೩ ರ ಫೆಬ್ರುವರಿ ಸಂಚಿಕೆಯಲ್ಲಿ ಪ್ರಕಟವಾದದ್ದು)ವೂ ಸಹಾಯಕವಾಗಿದೆ.

ರಾನಡೆಯ ಜೀವನದ ಅರ್ಥ ಅವರ ಮನಸ್ಸಿನ ವ್ಯಾಪಕವಾದ ಚಟು ವಟಿಕೆಗಳಲ್ಲಿ ಅಡಗಿದೆ. ಇಂಡಿಯದ ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಧಾರ್ಮಿಕ ದೋಷ ದೌರ್ಬಲ್ಯಗಳನ್ನು ಅವರು ಕಂಡುಹಿಡಿದು ಅವು ಗಳಿಗೆ ಪರಿಹಾರಗಳನ್ನು ಸೂಚಿಸಿದರಲ್ಲದೆ ಅವುಗಳನ್ನು ಪ್ರಯೋಗಿಸುವ ಪ್ರಯತ್ನ ಮಾಡಿದರು. ಡೆಕ್ಕನ್ ಕಾಲೇಜಿನ ಪ್ರೊ|| ಸೆಲ್ಬಿಯವರು ರಾನಡೆ ಯವರನ್ನು "ನಮ್ಮ ಸಾಕ್ರೆಟಿಸ್" ಎಂದು ಕರೆದದ್ದು ಸೂಕ್ತವಾಗಿದೆ. ರಾನಡೆ ಚಾಲತಿಯಲ್ಲಿದ್ದ ಮನಃ ಪ್ರವೃತ್ತಿಗಳನ್ನು ವಿರೋಧಿಸಿ, ಭಾವ ಪ್ರಚೋ ದನೆ ಮಾಡಿದರು. ಭಾರತದ ತೊಡಕಾದ ಸಮಸ್ಯೆಗಳನ್ನು ಅವರು ಪರ ಸ್ಪರ ಸಂಬಂಧವುಳ್ಳ ಒಂದೇ ಸಮಸ್ಯೆಯಾಗಿ ಗ್ರಹಿಸಿ ಅದನ್ನು ಪರಿಹರಿಸಲು ಪ್ರಯತ್ನಪಟ್ಟರು. ಅವರ ಪರಿಹಾರೋಪಾಯವು ನಾನಾ ಕಾಲುವೆಗಳಾಗಿ ಹರಿಯಿತು. ರಾನಡೆಯವರ ಮನಸ್ಸನ್ನು, ಅವರ ಭಾವನೆಗಳನ್ನು ತಿಳಿಯಲು ಬೇಕಾದಷ್ಟು ವಸ್ತು ದೊರೆಯುತ್ತದೆ. ನಾನಾ ವಿಷಯಗಳನ್ನು ಕುರಿತು ಅವರು ಬರೆದ ಪ್ರಬಂಧಗಳು ಪುಣೆಯ ಸಾರ್ವಜನಿಕ ಸಭಾದ ತ್ರೈಮಾಸಿಕ

ಪತ್ರಿಕೆಯಲ್ಲಿ ಪ್ರಕಟವಾಗಿವೆ. ಭಾರತ ರಾಷ್ಟ್ರೀಯ ಸಾಮಾಜಿಕ ಸಮ್ಮೇಳನದ ವಾರ್ಷಿಕಾಧಿವೇಶನಗಳಲ್ಲಿ ಅವರು ಮಾಡಿದ ಭಾಷಣಗಳನ್ನು ಶ್ರೀ ಸಿ.ವೈ. ಚಿಂತಾಮಣಿ ಅವರು Indian Social Reform ಎಂಬ ಸಂಪುಟದಲ್ಲಿ ಸಂಗ್ರಹಿಸಿದ್ದಾರೆ. Essays on Indian Economics ಎಂಬ ಹೊತ್ತಗೆಯಲ್ಲಿ ಅರ್ಥಶಾಸ್ತ್ರವನ್ನು ಕುರಿತ ರಾನಡೆಯವರ ಮುಖ್ಯ ಲೇಖನಗಳೆಲ್ಲ ಸಂಕಲಿತವಾಗಿವೆ. ಧಾರ್ಮಿಕ ಸಾಮಾಜಿಕ ವಿಷಯಗಳನ್ನು ಕುರಿತ ಅವರ ಪ್ರಬಂಧಗಳನ್ನು, ಭಾಷಣಗಳನ್ನು ಶ್ರೀ. ಎಂ. ಬಿ. ಕೊಳಾಸ್ಕರರು Religious and Social Reform ಎಂಬ ಹೆಸರಿನ ಸಂಪುಟದಲ್ಲಿ ಕೂಡಿಸಿ ಕೊಟ್ಟಿದ್ದಾರೆ. ಮರಾಠಿಯಲ್ಲಿ ಮಾಡಿದ ಧಾರ್ಮಿಕ ಉಪನ್ಯಾಸಗಳು "ಧರ್ಮಪರ ವ್ಯಾಖ್ಯಾನೆ" ಎಂಬ ಹೆಸರಿನಲ್ಲಿ ಪ್ರಕಟವಾಗಿವೆ. ಇವಲ್ಲದೆ ಅವರ Rise of the Maratha Power, ಮತ್ತು Introduction to the Satara Raja's and the Peshwa's Diaries ಎಂಬ ಗ್ರಂಥಗಳು ಪ್ರಸಿದ್ಧವಾಗಿವೆ.

ರಾನಡೆಯವರೊಡನೆ ಸಂಪರ್ಕ ಹೊಂದಿದ್ದ ಜನರನ್ನು ಕಂಡು ಮಾತಾಡಿ, ರಾನಡೆಯವರ ಚಿತ್ರವೊಂದನ್ನು—ಅವರ ಗಾತ್ರ ಬಣ್ಣಗಳೊಂದಿಗೆ—ಮನಸ್ಸಿನಲ್ಲಿ ಚಿತ್ರಿಸಿಕೊಳ್ಳಲು ಪ್ರಯತ್ನಿಸಿದ್ದೇನೆ. ಈ ಸಂಬಂಧದಲ್ಲಿ ನಾನು ಸರ್ವ ಶ್ರೀ. ಕೆ. ನಟರಾಜನ್, ಜಿ.ಕೆ. ದೇವಧರ್, ಸರ್ ಲಲುಭಾಯಿ ಸಾಮಲ್‌ದಾಸ್, ವೈ|| ಗೋಕುಲದಾಸ್ ಪಾರೆಖ್, ಸರ್ ಲಲುಭಾಯಿ ಷಾ, ಸರ್ ಹೊರ್ಮ್ಯಸ್ಜೀ ವಾಡಿಯ, ಕ್ಯಾಪ್ಟನ್ ಎಸ್.ಜಿ. ರಾನಡೆ, ಇವರುಗಳಿಗೆ ಮತ್ತು ಇತರರು ಕೆಲವರಿಗೆ—ಅವರು ಬೆಳಕು ಬೀರಿದ ಹಲವು ಸಂಗತಿಗಳಿಗಾಗಿ—ಋಣಿಯಾಗಿದ್ದೇನೆ.

ಈ ಗ್ರಂಥವನ್ನು ಬರೆಯುವುದರಲ್ಲಿ ಬಹು ಸಹಾಯಕವಾದ ಸಲಹೆಗಳನ್ನಿತ್ತ ರೆ|| ಡಾ|| ಮ್ಯಾಕ್‌ನಿಕೊಲ್, ಕೆಲವು ಉಪಯೋಗಕರವಾದ ಸಲಹೆಗಳನ್ನಿತ್ತ ಶ್ರೀ ಕೆ. ಟಿ. ಪಾಲ್, ಹಲವು ವಿಷಯಗಳನ್ನು ವಿವರಿಸಿದ ಶ್ರೀ ಎನ್. ಆರ್. ಫಾಟಕ್, ಕೆಲವು ವಿಚಾರಗಳಲ್ಲಿ ಸಹಾಯಕಳಾದ ನನ್ನ ಪತ್ನಿ—ಇವರುಗಳಿಗೆಲ್ಲಾ ಋಣಿಯಾಗಿದ್ದೇನೆ. ಹಲವು ವಿಧಗಳಲ್ಲಿ ಸಹಾಯಕರಾದ ರೆ|| ಬಿ.ಕೆ. ಉಜ್ಗರೆ, ಮಿಸೆಸ್. ಮರಿಬಾಯಿ ವಿಲಿಯಂಸ್, ಶ್ರೀ ಪಿ. ಎಸ್. ದೇವಲಿ ಮತ್ತು ಇತರರಿಗೆ ನನ್ನ ಕೃತಜ್ಞತೆ ಸಲ್ಲುತ್ತದೆ.

**ಜೆ. ಕೆ.**

# ವಿಷಯ ಸೂಚಿಕೆ

## ಚಿತ್ರಗಳು

# ಮಹಾದೇವ ಗೋವಿಂದ ರಾನಡೆ

## ೧. ಬಾಲ್ಯ

ಮಹಾದೇವ ಗೋವಿಂದ ರಾನಡೆ ನಾಸಿಕ ಜಿಲ್ಲೆಯ ನಿಫಾಡಿನಲ್ಲಿ ೧೮೪೨ ನೆಯ ಜನವರಿ ೧೮ ರಲ್ಲಿ ಚಿತ್ಪಾವನ ಬ್ರಾಹ್ಮಣ ಪಂಗಡದಲ್ಲಿ ಜನಿಸಿದರು. ರತ್ನಾಗಿರಿ ಜಿಲ್ಲೆಯಲ್ಲಿದ್ದ ರಾನಡೆಯ ಹಿರಿಯರು ಹಣದ ಮುಗ್ಗಟ್ಟಿನಿಂದಲೂ, ಕುಟುಂಬದ ಕಲಹಗಳಿಂದಲೂ ಸ್ವಗ್ರಾಮವನ್ನು ಬಿಟ್ಟು ದಖನ್ನಿನ ಷೋಲಾಪುರ ಜಿಲ್ಲೆಯಲ್ಲಿ ನೆಲಸಿದರು. ರಾನಡೆಯ ಮುತ್ತಜ್ಜನ ತಾಯಿ ಅಸಾಧಾರಣ ಸ್ತ್ರೀ. ಆಕೆ ಇಪ್ಪತ್ತು ಮಕ್ಕಳನ್ನು ಹೆತ್ತು ಅವರೆಲ್ಲರನ್ನೂ ಕಳೆದುಕೊಂಡಿದ್ದಳು. ಹನ್ನೆರಡು ವರ್ಷಗಳ ಕಾಲ ಆಕೆ ಕಠಿನ ವ್ರತಗಳನ್ನು ಆಚರಿಸದಿದ್ದಲ್ಲಿ, ಆಮೇಲೆ ಹುಟ್ಟಿದ ಮಗು ಭಾಸ್ಕರ ಅಪ್ಪಾ ಹುಟ್ಟುತ್ತಲೂ ಇರಲಿಲ್ಲ, ಹುಟ್ಟಿದ ಮೇಲೆ ಬದುಕುತ್ತಲೂ ಇರಲಿಲ್ಲ, ಎಂದು ಮನೆತನದ ಕಥೆಯಿದೆ. ಆಕೆ ದಿನವೂ ಒಂದು ಲಕ್ಷಬಾರಿ ಗೋ ಪ್ರದಕ್ಷಿಣೆ ಮಾಡಿ, ಗೋವಿನ ಉಚ್ಚಿಷ್ಟವಾದ ಜ್ವಾರೀಕಾಳಿನಿಂದ ಮಾಡಿದ ರೊಟ್ಟಿಯನ್ನು ಮಾತ್ರ ತಿಂದು ಜೀವಧಾರಣೆ ಮಾಡುತ್ತಿದ್ದಳು. ಇದು ಆಕೆ ನಡಸಿದ ಅನೇಕ ಕಠಿನ ವ್ರತಗಳಲ್ಲಿ ಒಂದು. ಭಕ್ತಿಗೆ ಹೆಸರಾಗಿದ್ದಂತೆ ಆಕೆ ಅತಿಥಿ ಸತ್ಕಾರಕ್ಕೂ ಹೆಸರುವಾಸಿಯಾಗಿದ್ದಳು.

ಭಾಸ್ಕರ ಅಪ್ಪಾ ಮೊದಲು ಸಾಂಗ್ಲೀ ಸಂಸ್ಥಾನದಲ್ಲಿ ಸರ್ಕಾರಿ ಗುಮಾಸ್ತೆಯಾಗಿದ್ದನು. ಆಮೇಲೆ ಆತನಿಗೆ ದಂಡಿನಲ್ಲಿ ಉದ್ಯೋಗ ದೊರೆಯಿತು. ಒಂದು ಬಾರಿ ಆತನು ದಳದ ಮುಂದಾಳಾಗಿ ಮೊಗಲ ಕೋಟೆಯೊಂದರ ಮೇಲೆ ದಾಳಿಯಿಟ್ಟು ಅದನ್ನು ವಶಪಡಿಸಿಕೊಂಡನು. ಜಯದ ನಂತರ ನಡೆದ ಲೂಟಿಯ ಯಾವ ವಸ್ತುವನ್ನೂ ಆತನು ಮುಟ್ಟಲೊಪ್ಪಲಿಲ್ಲವಂತೆ. ಕಡೆಯ ದಿನಗಳಲ್ಲಿ ಆತನು ಬಹುಕಾಲ ಪುಣೆಯ ಪೇಶ್ವೆಯವರಲ್ಲಿ ಸಾಂಗ್ಲಿಯ ನಾಯಕನ ಕಾರ್ಯಭಾರಿಯಾಗಿದ್ದನು.

ಆತನು ವಿವೇಕಶಾಲಿಯೂ ಋಜು ಸ್ವಭಾವದವನೂ ಆಗಿದ್ದುದರಿಂದ ಎಲ್ಲರಿಗೂ ಆತನಲ್ಲಿ ಗೌರವವಿತ್ತು. ಧರ್ಮಪರಾಯಣನಾಗಿದ್ದುಕೊಂಡು

ತನ್ನ ವೃದ್ಧಾಪ್ಯವನ್ನೆಲ್ಲ ದೇವರ ಧ್ಯಾನದಲ್ಲಿ ಕಳೆದನು. ಮರಣ ಕಾಲದಲ್ಲಿ ಆತನಿಗೆ ೯೫ ವರ್ಷ ವಯಸ್ಸು. ಆ ವಯಸ್ಸಿನಲ್ಲೂ ಆತನ ಹಲ್ಲುಗಳೂ ಕೈಕಾಲುಗಳೂ ಗಟ್ಟಿಯಾಗಿದ್ದುವು. ಸಾಯುವುದಕ್ಕೆ ಆರು ತಿಂಗಳ ಮುಂಚಿನವರೆಗೂ ಬೇರೊಬ್ಬರ ಸಹಾಯವಿಲ್ಲದೆ ಕುದುರೆಯನ್ನೇರುವಷ್ಟು ಶಕ್ತಿಯುತನಾಗಿದ್ದನು.

ಭಾಸ್ಕರನ ಹಿರಿಯ ಮಗನಾದ ಅಮೃತರಾವ್ ತಾತ್ಯಾ ರಾನಡೆಯ ಅಜ್ಜ. ಈತನೂ ಸಹ ತಂದೆಯಂತೆ ದೃಢಕಾಯನು, ಶಕ್ತನು ಮತ್ತು ಒಳ್ಳೆಯ ಅಶ್ವಾರೋಹಿ. ಸಂಸ್ಕೃತದಲ್ಲಿ ಈತನಿಗೆ ವಿಶೇಷ ಅಭಿಮಾನ, ಧರ್ಮ ಗ್ರಂಥಗಳಲ್ಲಿ ಬಹುವಾದ ಆಸಕ್ತಿ. ಈತನು ಮರಾಠಿಯಲ್ಲಿ ಪುರುಷ ಸೂಕ್ತಕ್ಕೆ ಒಂದು ವ್ಯಾಖ್ಯೆಯನ್ನು ಬರೆದನು. ಸರ್ಕಾರದಲ್ಲಿ ಗುಮಾಸ್ತನ ನೌಕರಿಯನ್ನು ಹೊಂದಿ ಮಾಮಲತ್‌ದಾರಿಯವರೆಗೂ ಏರಿದನು.

ಅಮೃತರಾವ್ ತಾತ್ಯಾನಿಗೆ ನಾಲ್ವರು ಗಂಡು ಮಕ್ಕಳು. ಅವರಲ್ಲಿ ಎರಡನೆಯವನಾದ ಗೋವಿಂದರಾಯನು ರಾನಡೆಯ ತಂದೆ. ಈತನು ನಿಫಾಡಿನಲ್ಲಿ ಸರ್ಕಾರಿ ಗುಮಾಸ್ತೆಯಾಗಿ ಕೆಲಸಕ್ಕೆ ಸೇರಿದನು. ಆಮೇಲೆ ಕೊಲ್ಹಾಪುರ ಸಂಸ್ಥಾನದಲ್ಲಿ ಉದ್ಯೋಗ ದೊರೆಯಿತು. ಆಗ ರಾನಡೆಗೆ ಎರಡೂವರೆ ವರ್ಷ ವಯಸ್ಸು. ಗೋವಿಂದರಾಯನು ಕೊಲ್ಹಾಪುರದಲ್ಲಿ ಹೆಚ್ಚು ಹೆಚ್ಚಿನ ಜವಾಬ್ದಾರಿ ಉದ್ಯೋಗಗಳನ್ನು ಸಂಪಾದಿಸುತ್ತ ಕೊನೆಯಲ್ಲಿ ರಾಜನ ಖಾಸಗಿ ಕಾರ್ಯಭಾರಿಯಾದನು. ಆ ಹುದ್ದೆಯಲ್ಲಿ ಆತನಿಗೆ ತಿಂಗಳಿಗೆ ೨೫೦ ರೂ. ಗಳ ಸಂಬಳ ಬರುತ್ತಿತ್ತು. ಶ್ರೀಮಂತಿಕೆಯೂ ಇಲ್ಲದೆ ಬಡತನವೂ ಇಲ್ಲದೆ ಕುಟುಂಬ ಸುಖವಾಗಿ ಸಾಗುತ್ತಿತ್ತು.

ಗೋವಿಂದರಾಯನದು ಹಟದ ಸ್ವಭಾವ. ಆದರೂ ಆತನು ದಯಾಳು. ಸೋದರರ ವಿದ್ಯಾಭ್ಯಾಸಕ್ಕಾಗಿಯೂ ಬಂಧುಗಳ ಸಹಾಯಕ್ಕಾಗಿಯೂ ಸಾಲಗಳನ್ನು ಹೊತ್ತಿದ್ದನು. ಹಿಂದೂ ಧರ್ಮದಲ್ಲಿಯೂ ಸಂಪ್ರದಾಯಗಳಲ್ಲಿಯೂ ಪುಣ್ಯಾಪುಣ್ಯ ವಿಷಯಗಳಲ್ಲಿಯೂ ಆತನಿಗೆ ಅಚಲವಾದ ನಂಬಿಕೆ. ರಾನಡೆಗೆ ತಂದೆಯಲ್ಲಿ ದೃಢವಾದ ಭಕ್ತಿಯಿತ್ತು; ಸಲಿಗೆಯಿರಲಿಲ್ಲ. ತಂದೆ ಮಕ್ಕಳು ಇಬ್ಬರೇ ಇದ್ದಾಗ ಕೂಡ ರಾನಡೆ ತಂದೆಯೊಡನೆ ಹೆಚ್ಚು ಮಾತಾಡುತ್ತಿರಲಿಲ್ಲ, ಸಾಧ್ಯವಾದಷ್ಟು ಬೇಗ ಅಲ್ಲಿಂದ ಮಾಯವಾಗುವುದೇ ರಾನಡೆಯ ಪದ್ಧತಿ.

ರಾನಡೆ ಮೂರು ವರ್ಷ ವಯಸ್ಸಿನ ಮಗುವಾಗಿದ್ದಾಗ (೧೮೪೫) ಒಂದು ವಿಚಿತ್ರ ಸಂಗತಿ ನಡೆಯಿತು. ರಾನಡೆಯ ತಾಯಿ ಗೋಪಿಕಾ ಬಾಯಿ ಮಗನನ್ನೂ ಚಿಕ್ಕ ಮಗು ದುರ್ಗಾಳನ್ನೂ ಕರೆದುಕೊಂಡು ನಿಫಾಡಿ ನಿಂದ ಪ್ರಯಾಣ ಹೊರಟಿದ್ದಳು. ಹಗಲು ಬಿಸಿಲಾದ್ದರಿಂದ ವಿಶ್ರಮಿಸಿ ಕೊಳ್ಳುತ್ತಾ ರಾತ್ರಿಯ ಸಮಯದಲ್ಲಿ ಎತ್ತಿನ ಗಾಡಿಯಲ್ಲಿ ಪ್ರಯಾಣ ಮಾಡುತ್ತಿದ್ದರು. ಜೊತೆಗೆ ರಕ್ಷಣೆಗಾಗಿ ಗೋಪಿಕಾಬಾಯಿಯ ಬಂಧುವಾದ ವಿಠೂ ಒಬ್ಬ ಸಿಪಾಯಿಯೂ ಇದ್ದರು. ವಿಠೂ ಕುದುರೆಯೇರಿ ಹಿಂಬಾ ಲಿಸಿ ಬರುತ್ತಿದ್ದನು. ರಾತ್ರಿ ಸುಮಾರು ಎರಡು ಗಂಟೆಯ ಸಮಯ. ಸುತ್ತಲೂ ಕತ್ತಲು ಕವಿದಿತ್ತು. ಗಾಳಿ ತಂಪಾಗಿ ಬೀಸುತ್ತಿತ್ತು. ಈ ಹಿತವಾದ ವಾತಾವರಣದಲ್ಲಿ ಗಾಡಿಯಲ್ಲಿದ್ದವರೆಲ್ಲ ನಿದ್ದೆಹೋದರು. ಎತ್ತು ಗಳು ತಮ್ಮಷ್ಟಕ್ಕೆ ಮುಂದೆ ಸಾಗುತ್ತಿದ್ದುವು. ಇದ್ದಕ್ಕಿದ್ದಂತೆ ರಸ್ತೆ ಕಡಿ ದಾಯಿತು, ಎತ್ತುಗಳು ದೌಡಾಯಿಸತೊಡಗಿದುವು. ನಿದ್ದೆಯ ಭರದಲ್ಲಿ ಮಹಾದೇವನು ಗಾಡಿಯ ತುದಿಗೆ ಉರುಳಿ ಬಂದಿದ್ದನು. ಎತ್ತುಗಳು ಓಡುವುದಕ್ಕೆ ಆರಂಭಿಸುತ್ತಲೇ ಅವನು ಜಾರಿ ರಸ್ತೆಗೆ ಬಿದ್ದನು. ತಾಯಿ ನಿದ್ದೆಯಲ್ಲಿ ಮುಳುಗಿದ್ದುದರಿಂದ ಆಕೆಗೆ ಆಗ ಎಚ್ಚರವಾಗಲಿಲ್ಲ. ಎತ್ತು ಗಳ ದೌಡಿನಿಂದ ಗಾಡಿ ಹೊಡೆಯುವವನಿಗೂ ಸಿಪಾಯಿಗೂ ಎಚ್ಚರ ವಾಯಿತು. ಆದರೆ ಗಾಡಿಯ ಸದ್ದಿನಿಂದ ಅವರಿಗೆ ಆಕಸ್ಮಿಕದ ಅರಿವಾಗ ಲಿಲ್ಲ. ಗಾಡಿ ಸುಮಾರು ಒಂದೂವರೆ ಮೈಲಿ ದೂರ ಸಾಗಿತು. ಮಗು ಕತ್ತಲಲ್ಲಿ, ರಸ್ತೆಯಲ್ಲಿ, ಸುಮಾರು ಕಾಲು ಗಂಟೆಯ ಕಾಲ ಮಲಗಿತ್ತು. ಆ ವೇಳೆಗೆ ಕುದುರೆಯ ಸವಾರನು ಅಲ್ಲಿಗೆ ಬಂದನು. ಕುದುರೆಯ ಗೊರಸಿನ ಸಪ್ಪಳವನ್ನು ಕೇಳಿ ಮಹಾದೇವನು "ವಿಠೂ ಮಾವ, ನಾನು ಇಲ್ಲಿ ಬಿದ್ದು ಬಿಟ್ಟಿದೇನೆ" ಎಂದು ಕೂಗಿಕೊಂಡನು. ಇವೇ ನಮಗೆ ತಿಳಿದುಬಂದಿರುವ ರಾನಡೆಯ ಮೊದಲ ಮಾತುಗಳು. ವಿಠೂವಿಗಾದ ಆಶ್ಚರ್ಯವನ್ನೂ ಗಾಬರಿ ಯನ್ನೂ ಏನೆಂದು ಹೇಳೋಣ! ಅವನು ಕೂಡಲೆ ಮಗುವನ್ನು ಮೇಲೆತ್ತಿ ಕೊಂಡು ಕುದುರೆಯನ್ನು ಓಡಿಸುತ್ತಾ ಗಾಡಿಯನ್ನು ಹಿಡಿದನು. ಗೋಪಿಕಾ ಬಾಯಿಯನ್ನು ಕೂಗಿ "ಎಚ್ಚರವಾಗಿದ್ದೀಯಾ? ಮಕ್ಕಳು ತಮ್ಮ ತಮ್ಮ ಜಾಗದಲ್ಲಿವೆಯೆ?" ಎಂದು ವಿಚಾರಿಸಿದನು. ಆಕೆ ನಿದ್ರೆಯ ಜೊಂಪಿನಲ್ಲಿ "ಹೂ ಎಲ್ಲ ಸರಿಯಾಗಿದೆ" ಎಂದು ಗೊಣಗಿದಳು. ಆಗ ವಿಠೂ—"ನಿನ

ಗಿನ್ನೂ ನಿದ್ದೆ. ಪಕ್ಕದಲ್ಲಿ ಮಕ್ಕಳಿವೆಯೆ? ಸರಿಯಾಗಿ ನೋಡು" ಎಂದನು. ಪಕ್ಕದಲ್ಲಿ ತಡಕಾಡಿ, ಮಹಾದೇವನಿಲ್ಲದಿರುವುದನ್ನು ಅರಿತು ಗಾಬರಿಯಿಂದ ಕೂಗಿಕೊಂಡಳು. ವಿಠೂ ಕೂಡಲೆ ಮಗುವನ್ನು ಗಾಡಿಯಲ್ಲಿರಿಸಿ, ತಾಯಿಯ ಭಯವನ್ನು ನಿವಾರಿಸಿ, "ಇವೊತ್ತು ದೇವರು ನಮ್ಮಲ್ಲಿ ಬಹು ದಯೆ ತೋರಿದ್ದಾನೆ" ಎಂದು ಹೇಳಿದನು.

ರಾನಡೆಯ ಬಾಲ್ಯ ಕಾಲ ಹದಿಮೂರನೆಯ ವಯಸ್ಸಿನವರೆಗೆ ಕೊಲ್ಹಾಪುರದಲ್ಲಿ ಕಳೆಯಿತು. ಆರನೆಯ ವಯಸ್ಸಿನಲ್ಲಿ ಆತನನ್ನು ಮರಾಠಿ ಶಾಲೆಗೆ ಹಾಕಿದರು; ೧೮೫೧ರಲ್ಲಿ ಕೊಲ್ಹಾಪುರ ಇಂಗ್ಲಿಷ್ ಸ್ಕೂಲಿಗೆ ಸೇರಿಸಿದರು. ಹೆಡ್‌ಮಾಸ್ಟರ್ ಕೃಷ್ಣರಾವ್ ಭಾಘಾಜೀ ಇಂಗ್ಲಿಷನ್ನು ಚೆನ್ನಾಗಿ ಹೇಳಿಕೊಡುತ್ತಿದ್ದರೆಂದು ರಾನಡೆ ಹೇಳುತ್ತಿದ್ದರು. ತಂದೆ ತಾಯಿಗಳೂ ಉಪಾಧ್ಯಾಯರೂ ರಾನಡೆಯನ್ನು ಚುರುಕಾದ ಹುಡುಗನೆಂದು ಭಾವಿಸಿರಲಿಲ್ಲ. ಚಿಕ್ಕಂದಿನಲ್ಲಿ ಆತನು ಮೊದ್ದಾಗಿ ತರಗತಿಯಲ್ಲಿ ಹಿಂದಾಗಿದ್ದನು. ದೊಡ್ಡವನಾಗುವವರೆಗೂ ಕೆಲವು ವರ್ಣಗಳು ಆತನ ಬಾಯಿಂದ ಸರಿಯಾಗಿ ಹೊರಡುತ್ತಿರಲಿಲ್ಲ. ತಾಯಿಗೆ ಅವನದೇ ಯೋಚನೆಯಾಗಿತ್ತು: "ಮಹಾದೇವ ಮುಂದೆ ಏನಾಗುತ್ತಾನೆಯೊ ಏನೊ! ಹೆಂಡತಿಗೆ ಒಂದು ಹತ್ತು ರೂಪಾಯನ್ನಾದರೂ ದುಡಿದು ಹಾಕುತ್ತಾನೆಯೊ ಇಲ್ಲವೋ?" ಎನ್ನುವಳು. ಚಿಕ್ಕಂದಿನಲ್ಲಿ ಅವನು ಅಷ್ಟು ಶುಭ್ರವಿಲ್ಲದೆ ಒಡ್ಡೊಡ್ಡಾಗಿದ್ದನು. ಕಾಲೇಜಿನಲ್ಲಿ ಜೊತೆಯ ಹುಡುಗರು ಅವನಿಗೆ "ಮರಿಯಾನೆ" ಎಂದು ಹೆಸರಿಟ್ಟಿದ್ದರು. ಅದಕ್ಕನುಗುಣವಾಗಿ ಅವನಲ್ಲಿ ರಾನಡೆ ಮನೆತನದ ದೃಢವಾದ ಮೈಕಟ್ಟು ಉಳಿದು ಬಂದಿತ್ತು.

ರಾನಡೆಯಲ್ಲಿ ಚಿಕ್ಕಂದಿನಿಂದಲೂ ಶಾಂತತೆ ದೃಢತೆಗಳು ಮನೆ ಮಾಡಿದ್ದವು. ಆತನ ಮನಸ್ಸು ಉತ್ಸಾಹದಿಂದ ಮೇರೆ ಮೀರುತ್ತಿರಲಿಲ್ಲ, ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ಹದಗೆಡುತ್ತಿರಲಿಲ್ಲ. ನೆರೆಹೊರೆಯ ಮಕ್ಕಳು ತಾವು ಪರೀಕ್ಷೆಯಲ್ಲಿ ಪಾಸಾದ ವಿಷಯವನ್ನು ತಂದೆತಾಯಿಗಳಿಗೆ ಹೇಳಲು ಹಾತೊರೆಯುತ್ತಿದ್ದಾಗ ರಾನಡೆ ಮೌನವಾಗಿರುತ್ತಿದ್ದನು. ಅವನು ಪಾಸಾದ ಸಂಗತಿಯನ್ನು ತಿಳಿದು ತಾಯಿ "ಮಹಾದೇವ, ನನಗೇಕೆ ಸುದ್ದಿಯನ್ನು ತಿಳಿಸಲಿಲ್ಲ" ಎಂದು ಕೇಳಿದರೆ, "ಏನು ಮಹಾ ವಿಷಯ ಎಂದು ತಿಳಿಸಬೇಕು? ದಿನವೂ ಶಾಲೆಗೆ ಹೋಗುತ್ತ ನಮ್ಮ ಕೆಲಸ ನಾವು ಮಾಡುತ್ತಿದ್ದರೆ,

ಪಾಸಾಗಲೇ ಬೇಕು ; ಅಷ್ಟೆ." ಎನ್ನುತ್ತಿದ್ದನು.

ತನ್ನ ಕೆಲಸವಲ್ಲಿ ಆತನು ತೋರಿಸುತ್ತಿದ್ದ ತಲ್ಲೀನತೆ ಮನುಜನಿಗೆ ಮಗು ತಂದೆ ಎಂಬ ನಾಣ್ಣುಡಿಯನ್ನು ನೆನಪಿಗೆ ತರುತ್ತದೆ. ಅಕ್ಷರಾಭ್ಯಾಸ ನಡೆಯುತ್ತಿದ್ದ ವಯಸ್ಸಿನಲ್ಲಿ ಕೂಡ ಅವನು ಶಾಲೆ ಮುಗಿದ ಮೇಲೆ ಮನೆಗೆ ಬಂದು, ಅಕ್ಷರಗಳನ್ನು ಬಾಯಲ್ಲಿ ಹೇಳಿಕೊಳ್ಳುತ್ತ ಗೋಡೆಯ ಮೇಲೆ ಬೆರಳಲ್ಲಿ ಬರೆಯುತ್ತಿದ್ದನು. ರಸ್ತೆಯಲ್ಲಿ ಒಬ್ಬನೇ ಆಡುತ್ತಿರುವಾಗ ನೆಲದ ಮೇಲೆ ಕುಳಿತು ಮಣ್ಣಿನಲ್ಲಿ ಮಗ್ಗಿಯನ್ನು ಬರೆಯುತ್ತಿದ್ದನು. ಅವನಿಗೆ ಅನೇಕ ವೇಳೆ ಆಟ ಪಾಠಗಳು ಒಂದೇ ಆಗಿರುತ್ತಿದ್ದವು.

ಚಿಕ್ಕಂದಿನಿಂದಲೂ ರಾನಡೆಯಲ್ಲಿ ನ್ಯಾಯಾನ್ಯಾಯಗಳ ಸೂಕ್ಷ್ಮ ವಿವೇಚನೆಯಿತ್ತು. ಒಂದು ಬಾರಿ, ತಾಯಿ ಅವನ ಕೈಯಲ್ಲಿ ರೊಟ್ಟಿಯ ಎರಡು ತುಂಡುಗಳನ್ನಿಟ್ಟು ಒಂದನ್ನು ಹತ್ತಿರವಲ್ಲಿದ್ದ ಬಡ ಒಕ್ಕಲು ಹುಡುಗನಿಗೆ ಕೊಡುವಂತೆ ಹೇಳಿದಳು. ರಾನಡೆ ದೊಡ್ಡ ಚೂರನ್ನು ಹುಡುಗನಿಗೆ ಕೊಟ್ಟನು. "ದೊಡ್ಡದನ್ನು ನೀನಿಟ್ಟುಕೊಂಡು ಸಣ್ಣದನ್ನು ಅವನಿಗೆ ಕೊಡುತ್ತೀಯೆಂದು ತಿಳಿದಿದ್ದೆ" ಎಂದು ತಾಯಿ ಹೇಳಿದಳು. ಅದಕ್ಕೆ ಅವನು "ನಿನ್ನ ಮನಸ್ಸು ಹಾಗಿರಬೇಕೆಂದು ತಿಳಿದು ಹಾಗೆ ಮಾಡಿದೆ" ಎಂದನು.

ಹುಡುಗನಾಗಿದ್ದಾಗ ರಾನಡೆಗೆ ಸೋಂಗಟ್ಯಾ (ದಾಳಪಗಡೆ) ಆಟ ಬಹು ಇಷ್ಟವಾಗಿತ್ತು. ಹತ್ತನೆಯ ವಯಸ್ಸಿನಲ್ಲಿ ಒಂದು ಬಾರಿ, ಯಾರೂ ಆಟಕ್ಕೆ ಸಿಕ್ಕದಿರಲು ಪಡಸಾಲೆಯ ಕಂಬದ ಮುಂದೆ ಕುಳಿತು ಅದನ್ನೇ ತನ್ನ ಎದುರಾಳಿಯೆಂದು ತಿಳಿದು ಆಟವನ್ನು ಆರಂಭಿಸಿದನು. ಬಲಗೈಯಲ್ಲಿ ಕಂಬಕ್ಕೆ ಆಟವಾಡಿದನು. ಎಡಗೈಯಲ್ಲಿ ತನಗೆ ದಾಳ ಹಾಕಿದನು. ಕಂಬಕ್ಕೆ ಜಯ ಲಭಿಸಿತು. ಇದನ್ನು ಕೇಳಿದವರು ಮನುಷ್ಯನಾಗಿ ಕಂಬಕ್ಕೆ ಸೋತೆಯಲ್ಲ ಎಂದು ಹಾಸ್ಯ ಮಾಡಲು,—ಸೋತದ್ದು ನಿಜ, ಕಂಬಕ್ಕೆ ಜಯವಾಯಿತು, ಅದರಲ್ಲಿ ಅವಮಾನವೇನು ?—ಎಂದು ನುಡಿದನು. ಈ ಮಾತಿನಲ್ಲಿ ಹಾಸ್ಯ ಶೀಲತೆ ಇಲ್ಲದಿರಬಹುದು. ಆದರೆ ನ್ಯಾಯಪರತೆಯೂ ವಾಸ್ತವಾಂಶಗಳನ್ನು ಗಮನಿಸುವ ಮನೋಭಾವವೂ ಕಂಡುಬರುತ್ತವೆ.

ಮಗನನ್ನು ಆಭರಣಗಳಿಂದ ಸಿಂಗರಿಸಬೇಕೆಂದು ತಾಯಿಗೆ ಇಷ್ಟ. ಕಷ್ಟಪಟ್ಟು ಉಳಿಸಿದ ಹಣದಿಂದ ಕತ್ತಿಗೊಂದು ಆಭರಣವನ್ನೂ ಕೈಗೆ ಬಳೆ

ಯನ್ನೂ ಬೆರಳಿಗೆ ಉಂಗುರವನ್ನೂ ಮಾಡಿಸಿ ತೊಡಿಸುತ್ತಿದ್ದಳು. ರಾನಡೆಗೆ ಒಡವೆ ಇಷ್ಟವಿರಲಿಲ್ಲ. ಕಂಠಾಭರಣವನ್ನೂ ಕಂಕಣವನ್ನೂ ಬಟ್ಟೆಯಿಂದ ಮುಚ್ಚಿಕೊಳ್ಳುತ್ತಿದ್ದನು. ಉಂಗುರ ಕಾಣದಂತೆ ಕೈಯನ್ನು ಮುಷ್ಟಿಗಟ್ಟುತ್ತಿದ್ದನು. ತಾಯಿ ಇಷ್ಟಪಟ್ಟು ಒಡವೆ ತೊಡಿಸಿದರೆ ಅದನ್ನೇಕೆ ಸರಿಯಾಗಿ ತೊಡಬಾರದೆಂದು ಬಂಧುವೊಬ್ಬರು ಸಿಟ್ಟಿನಿಂದ ಪ್ರಶ್ನಿಸಿದರು. ಅದಕ್ಕೆ ಮಹಾದೇವನು—ಮನೆಯಿಂದ ಮನೆಗೆ ಭಿಕ್ಷಾನ್ನಕ್ಕಾಗಿ ತಿರುಗುವ ಬಡ ಬ್ರಾಹ್ಮಣ ವಿದ್ಯಾರ್ಥಿಗಳು ಒಡವೆ ಹಾಕಿಕೊಳ್ಳುತ್ತಾರೆಯೆ? ನಾನೇಕೆ ಧರಿಸಬೇಕು?—ಎಂದು ಕೇಳಿದನು.

ರಾನಡೆಯ ೧೨ ನೆಯ ವಯಸ್ಸಿನಲ್ಲಿ (೧೮೫೪) ತಾಯಿ ಎಂಟನೆಯ ಮಗುವನ್ನು ಹೆರುವಾಗ ತೀರಿಹೋದಳು. ಎಂಟು ಮಕ್ಕಳಲ್ಲಿ ಮಹಾದೇವ ಮತ್ತು ದುರ್ಗಾ ಇಬ್ಬರೇ ಉಳಿದವರು. ರಾನಡೆಯ ತಂದೆ ಹೆಂಡತಿ ಸತ್ತ ೧೬ ದಿನಗಳೊಳಗೆ ಪುನಃ ಮದುವೆಯಾದರು. ಅದಾದ ಕೆಲವು ದಿನಗಳಲ್ಲಿಯೆ ಮಹಾದೇವ ಮತ್ತು ದುರ್ಗಾ ಇವರ ಮದುವೆಗಳೂ ಜರುಗಿದವು. ಮಹಾದೇವನ ಹೆಂಡತಿ ಸಖೂಬಾಯಿ. ಆಕೆ ವಾಯಿಯ ಮೋರೋಪಂತ ದಾಂಡೇಕರರ ಮಗಳು. ಮದುವೆಯಾದಾಗ ಆಕೆಯ ವಯಸ್ಸು ಒಂಭತ್ತು.

೧೮೫೬ ರ ವೇಳೆಗೆ ಕೊಲ್ಹಾಪುರದಲ್ಲಿ ರಾನಡೆಯ ವಿದ್ಯಾಭ್ಯಾಸ ಮುಗಿದಿತ್ತು. ತಂದೆ ಅವನನ್ನು ಬೊಂಬಾಯಿನ ಎಲ್ಫಿನ್‌ಸ್ಟನ್ ಹೈಸ್ಕೂಲಿಗೆ ಸೇರಿಸಿದರು. ಅಲ್ಲಿ ರಾನಡೆಯ ಮನಸ್ಸು ಅರಳಲು ಪ್ರಾರಂಭವಾಯಿತು. ಅಲ್ಲಿನ ಹೆಡ್ಮಾಸ್ಟರು, ರಾನಡೆ ಬಹು ಬುದ್ಧಿಶಾಲಿಯೆಂದೂ ಪ್ರಸಿದ್ಧ ಪುರುಷನಾಗುವನೆಂದೂ ಎಷ್ಟೋ ಬಾರಿ ಹೇಳುತ್ತಿದ್ದರು. ರಾನಡೆ ಆ ಸ್ಕೂಲಿನಲ್ಲಿ ಮೂರು ವರ್ಷ ಕಳೆದರು. ಅವರಿಗೆ ತಿಂಗಳಿಗೆ ರೂ. ೧೦, ೧೫, ೨೦—ಈ ರೀತಿಯಾಗಿ ಕ್ರಮವಾಗಿ ಮೂರು ವರ್ಷಗಳೂ ವಿದ್ಯಾರ್ಥಿ ವೇತನ ದೊರೆಯಿತು.

## ೨. ಕಾಲೇಜಿನಲ್ಲಿ—ವಿದ್ಯಾರ್ಥಿ ಮತ್ತು ಉಪಾಧ್ಯಾಯರು

ಬೊಂಬಾಯಿ ವಿಶ್ವವಿದ್ಯಾನಿಲಯದಲ್ಲಿ ೧೮೫೯ ರಲ್ಲಿ ಮೊದಲನೆಯ ಬಾರಿಗೆ ಮೆಟ್ರಿಕ್ಯುಲೇಷನ್ ಪರೀಕ್ಷೆ ನಡೆಯಿತು. ಅದರಲ್ಲಿ ಪಾಸಾದ ೨೧ ಮಂದಿ ವಿದ್ಯಾರ್ಥಿಗಳಲ್ಲಿ ರಾನಡೆಯೂ ಒಬ್ಬರು. ಪರೀಕ್ಷೆಯ ನಂತರ ಅವರಿಗೆ ತಿಂಗಳಿಗೆ ೭೦ ರೂ. ಗಳಂತೆ ಮೂರು ವರ್ಷಕಾಲ ನಡೆಯುವ ಕೆಳ ದರ್ಜೆಯ ವಿದ್ಯಾರ್ಥಿ ವೇತನವೊಂದು ದೊರೆಯಿತು ; ೧೮೬೧ ರಲ್ಲಿ, ತಿಂಗಳಿಗೆ ೧೨೦ ರೂ. ಗಳಂತೆ ಮೂರು ವರ್ಷಗಳಕಾಲ ದೊರೆಯುವ ಮೇಲ್ದರ್ಜೆಯ ವಿದ್ಯಾರ್ಥಿ ವೇತನ ಲಭಿಸಿತು. ೧೮೬೨ ರ ಏಪ್ರಿಲ್ ನಲ್ಲಿ ಅವರು ಬಿ. ಎ. ಪರೀಕ್ಷೆಯಲ್ಲಿ ಪ್ರಥಮ ವರ್ಗದಲ್ಲಿ ತೇರ್ಗಡೆಯಾದರು. ಆನರ್ಸ್ ಪರೀಕ್ಷೆಗೆ ಓದಿ ಅದರಲ್ಲಿ ಎರಡನೆಯ ವರ್ಗದಲ್ಲಿ ಮಾತ್ರ ಪಾಸಾದರು. ಆದರೆ ಪರೀಕ್ಷಕರು ಅವರ ಉತ್ತರ ಪತ್ರಗಳಲ್ಲಿ ತೋರಿ ಬಂದ ಅವರ ಬುದ್ಧಿ ಶಕ್ತಿಯನ್ನೂ ಪಾಂಡಿತ್ಯವನ್ನೂ ಮೆಚ್ಚಿ ತಮ್ಮ ಸ್ನೇಹಿತರಿಂದ ನಿಧಿಯನ್ನು ಸಂಗ್ರಹಿಸಿ ರಾನಡೆಯವರಿಗೆ ಚಿನ್ನದ ಪದಕವನ್ನೂ ೨೦೦ ರೂ. ಬೆಲೆ ಬಾಳುವ ಪುಸ್ತಕಗಳನ್ನೂ ಬಹುಮಾನವಾಗಿ ಅರ್ಪಿಸಿದರು.

೧೮೬೧ ರಲ್ಲಿ ರಾನಡೆ ಎಲ್ಫಿನ್‌ಸ್ಟನ್ ಸಂಸ್ಥೆಯಲ್ಲಿ ಕೆಳದರ್ಜೆಯ ಉಪಾಧ್ಯಾಯರಾಗಿ ನೇಮಕವಾದರು. ೧೮೬೨ ರಲ್ಲಿ ಅವರು " ಇಂದು ಪ್ರಕಾಶ "ವೆಂಬ ಇಂಗ್ಲಿಷ್—ಮರಾಠಿ ವಾರಪತ್ರಿಕೆಯ ಇಂಗ್ಲಿಷ್ ಸಂಪಾದಕರಾಗಿ ನೇಮಕವಾದರು. ರಾಜಕೀಯ ಪ್ರಗತಿಯನ್ನೂ, ಸಾಮಾಜಿಕ ಸುಧಾರಣೆಯನ್ನೂ ಆರ್ಥಿಕ ಅಭಿವೃದ್ಧಿಯನ್ನೂ ಪ್ರತಿಪಾದಿಸುವುದು ಪತ್ರಿಕೆಯ ಗುರಿಯಾಗಿತ್ತು. ರಾನಡೆ ನಾಲ್ಕು ತಿಂಗಳ ಕಾಲ ಸಂಪಾದಕರಾಗಿದ್ದುಕೊಂಡು ಪತ್ರಿಕೆಯ ಕೆಲಸವನ್ನು ತೃಪ್ತಿಕರವಾಗಿ ನಡಸಿದರು. ೧೮೬೪ ರಲ್ಲಿ ಅವರು ಎಂ. ಎ. ಡಿಗ್ರಿಯನ್ನು ಹೊಂದಿದರು. ೧೮೬೫ ರಲ್ಲಿ ಮುಂಬಯಿ ವಿಶ್ವವಿದ್ಯಾನಿಲಯದ ಫೆಲೊ ಆದರು. ದೇಶೀಯರಲ್ಲಿ ಫೆಲೊ ಆಗಲು ಇವರೇ ಮೊದಲಿಗರು. ಬಿ. ಎ. ಡಿಗ್ರಿಯನ್ನು ಹೊಂದಿದ ನಂತರ ಲಾ ಪರೀಕ್ಷೆಗೆ ಓದಿ, ೧೮೬೬ ರಲ್ಲಿ ಎಲ್‌ಎಲ್. ಬಿ., ಪರೀಕ್ಷೆಯಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದರು.

" ತರಗತಿಯಲ್ಲಿ ರಾನಡೆ ಒಬ್ಬರೇ ಯೋಚಿಸುವ ವಿದ್ಯಾರ್ಥಿ " ಎಂದು ಅವರ ಪ್ರೊಫೆಸರ್ ಒಬ್ಬರು ಹೇಳುತ್ತಿದ್ದರು. ರಾನಡೆಯವರ ಉದ್ಯೋಗ ಶೀಲತೆ ಅಪಾರವಾಗಿತ್ತು. ಅನೇಕ ಪುಸ್ತಕಗಳನ್ನು ಓದಿ ಸಾರಾಂಶಗಳನ್ನು ಸಂಗ್ರಹಿಸಿ ಪ್ರಬಂಧಗಳನ್ನು ಬರೆಯುತ್ತಿದ್ದರು. ಪ್ರಸಿದ್ಧರಾದ ಅನೇಕ ಪುರುಷರಂತೆ ಇವರಿಗೂ ಒಳ್ಳೆಯ ಸ್ಮೃತಿಶಕ್ತಿ ಇತ್ತು. ಗ್ರಂಥವನ್ನೋದಿದ ಮೇಲೆ ಕಷ್ಟವಿಲ್ಲದೆಯೆ ಅದರ ಸಾರವತ್ತಾದ ಭಾಗಗಳನ್ನು ನಿರೂಪಿಸುವ ಶಕ್ತಿಯಿತ್ತಂತೆ.

ಸುತ್ತಮುತ್ತ ನಡೆಯುತ್ತಿದ್ದ ವಿಷಯಗಳ ಕಡೆ ಗಮನವನ್ನು ಹರಿಯ ಬಿಡದೆ ರಾನಡೆ ಪುಸ್ತಕಭಂಡಾರದಲ್ಲಿ ಕುಳಿತು ತಮ್ಮ ವಾರದ ಪ್ರಬಂಧ ವನ್ನು ಸಿದ್ಧಪಡಿಸುವುದರಲ್ಲೋ, ಗ್ರೋಟ್, ಗಿಬ್ಬನ್, ಮೆಕಾಲೆ, ಲಾಕ್, ಹ್ಯಾಮಿಲ್ಟನ್ ಮೊದಲಾದ ಪ್ರಸಿದ್ಧ ಲೇಖಕರ ಕೃತಿಗಳನ್ನು ಓದುವುದ ರಲ್ಲೋ ನಿರತರಾಗಿರುತ್ತಿದ್ದರೆಂದೂ, ಅವರ ಪ್ರೊಫೆಸರುಗಳೂ ಪ್ರಿನ್ಸಿ ಪಲರೂ ರಾನಡೆ ಮುಂದೆ ಬೊಂಬಾಯಿಯ ಸಾರ್ವಜನಿಕ ಜೀವನದಲ್ಲಿ ಹೆಸರುವಾಸಿಯಾಗಿ ಅತ್ಯುಚ್ಚ ಗೌರವಗಳನ್ನು ಪಡೆಯುವರೆಂದು ಹೇಳು ತ್ತಿದ್ದರೆಂದೂ ಸಮಕಾಲೀನರಾದ ಡಿ. ಈ. ವಾಚಾ ತಿಳಿಸುತ್ತಾರೆ.

ರಾನಡೆಯವರಿಗೆ ತಮ್ಮ ಗುರುಗಳ ವಿಷಯದಲ್ಲಿ, ಅವರಲ್ಲಿಯೂ ಸರ್ ಅಲೆಗ್ಸಾಂಡರ್ ಗ್ರಾಂಟ್ ಅವರ ವಿಚಾರದಲ್ಲಿ ಬಹುವಾದ ಗೌರವವಿತ್ತು. ಬಹುಮಂದಿ ತರುಣರಂತೆ ರಾನಡೆಯವರೂ ದೇಶಾಭಿಮಾನದಿಂದ ಉಕ್ಕು ತ್ತಿದ್ದರು. ವಿದ್ಯಾರ್ಥಿದಶೆಯಲ್ಲಿ ಒಂದು ಬಾರಿ ಅಭಿಮಾನದಿಂದ ತೂಕ ತಪ್ಪಿ, ಬ್ರಿಟಿಷರ ಆಡಳಿತವನ್ನು ಮರಾಠರ ಆಡಳಿತದೊಡನೆ ಹೋಲಿಸಿ ತೀರ ಅಲ್ಲಗಳೆದರಂತೆ. ಸರ್ ಅಲೆಗ್ಸಾಂಡರ್ ರಾನಡೆಗೆ ಹೇಳಿಕಳಿಸಿ ಅವರ ಅಭಿಪ್ರಾಯಗಳನ್ನು ಖಂಡಿಸಿ, ಆರು ತಿಂಗಳ ಕಾಲ ವೇತನವನ್ನು ನಿಲ್ಲಿಸಿ ಶಿಕ್ಷಿಸಿದರಂತೆ.

ಈ ವೇಳೆಗೆ ರಾನಡೆ ಇಂಗ್ಲಿಷ್ ಭಾಷೆಯಲ್ಲಿ ಪ್ರಾವೀಣ್ಯವನ್ನು ಪಡೆ ದಿದ್ದರು. ದೇಶೀಯರೊಬ್ಬರು ಇಂಗ್ಲಿಷನ್ನು ಎಷ್ಟು ಸೊಗಸಾಗಿ ಬರೆಯ ಬಲ್ಲರೆಂಬುದನ್ನು ತೋರಿಸುವುದಕ್ಕಾಗಿ ಬೊಂಬಾಯಿ ಪ್ರಾಂತದ ವಿದ್ಯಾಧಿ ಕಾರಿಗಳಾದ ಹೊವರ್ಡ್ ರಾನಡೆಯವರ ಹಲವು ಪ್ರಬಂಧಗಳನ್ನು ಇಂಗ್ಲೆಂಡಿಗೆ ಕಳಿಸಿಕೊಟ್ಟರು. ಕಾಲೇಜಿನಲ್ಲಿದ್ದಾಗ ರಾನಡೆ ಗಮನಾರ್ಹ

ವಾದ ಹಲವು ಇಂಗ್ಲಿಷ್ ಪದ್ಯಗಳನ್ನೂ ರಚಿಸಿದ್ದರಂತೆ. ಭಾಷಾವಿಷಯಕ ವಾದ ಈ ಪ್ರಾವೀಣ್ಯ ಹಾಗಿರಲಿ. ಇಂಗ್ಲಿಷ್ ಜ್ಞಾನದಿಂದ ನೂತನ ಭಾವ ಪ್ರಪಂಚಕ್ಕೆ ಪ್ರವೇಶ ದೊರೆತಂತಾಗಿತ್ತು ರಾನಡೆಯವರಿಗೆ. ಪಾಶ್ಚಾತ್ಯರ ಮನಸ್ಸಿಗೆ ಪುನರುಜ್ಜೀವನ ಸುಧಾರಣಾ ಚಳವಳಿ (Renaissance and Reformation) ಗಳೂ ರಾಜಕೀಯ ತತ್ತ್ವಜ್ಞಾನಿಗಳ ಬರಹಗಳೂ ಆಧುನಿಕ ವಿಜ್ಞಾನವೂ ಸ್ಫೂರ್ತಿಯನ್ನು ನೀಡುತ್ತವೆ. ಹಿಂದುಗಳ ಮನಸ್ಸಿಗೆ ಸ್ಫೂರ್ತಿದಾಯಕವಾದುವು ವೇದೋಪನಿಷತ್ತುಗಳು, ಪುರಾಣಗಳು, ಭಕ್ತಿ ಪಂಥಗಳು. ಈ ಎರಡು ಮನೋಧರ್ಮಗಳ ನಡುವೆ ಬೇಕಾದಷ್ಟು ಅಂತರವಿದೆ. ಹಿಂದೂ ಧರ್ಮ ಸಂಪ್ರದಾಯಗಳಲ್ಲಿ ನುರಿತ ರಾನಡೆಯವರ ಸೂಕ್ಷ್ಮಗ್ರಾಹಿಯಾದ ಮನಸ್ಸಿನ ಮೇಲೆ ಪಾಶ್ಚಾತ್ಯ ವಿದ್ಯೆ ತನ್ನ ಪ್ರಭಾವವನ್ನು ಬೀರದಿರಲಿಲ್ಲ. ಇಂಗ್ಲಿಷ್ ವಿದ್ಯಾಭ್ಯಾಸ ಅವರ ಜೀವನದಲ್ಲಿ ಒಂದು ಪ್ರೇರಕಶಕ್ತಿಯಾಗಿ ಪರಿಣಮಿಸಿತು.

ಪಾಶ್ಚಾತ್ಯ ವಿದ್ಯಾಭ್ಯಾಸದಿಂದ ಪೂರ್ವದೇಶಗಳಿಗೆ ಎಷ್ಟು ಪ್ರಯೋಜನವುಂಟೆಂಬುದನ್ನು ಅವರು ಬಹು ಚೆನ್ನಾಗಿ ಅರಿತಿದ್ದರು. ಆಗಸ್ಟ ೧೮೭೮ ರಲ್ಲಿ ಅವರು ಮಾಡಿದ ಒಂದು ಭಾಷಣದಿಂದ ಈ ವಿಷಯ ವ್ಯಕ್ತವಾಗುತ್ತದೆ—

ಇಂಗ್ಲಿಷ್ ಭಾಷೆಯಿಂದಾಗುವ ಪ್ರಯೋಜನವೇನೆಂಬುದನ್ನು ಯಾರೂ ಸುಮ್ಮನೆ ಮಾತಾಡಿ ತಿಳಿಸಲಾರರು, ಹಾಗೆ ತಿಳಿಸುವುದು ಸಾಧ್ಯವೂ ಅಲ್ಲ. ಆ ಭಾಷೆಯನ್ನೂ ಅದರ ಜ್ಞಾನಭಂಡಾರವನ್ನೂ ಅಭ್ಯಾಸಮಾಡಿ ತಿಳಿಯಬೇಕು. ಅನುಭವದ ಆಧಾರದಿಂದ ಮಾತ್ರ ಅವುಗಳ ಪ್ರಯೋಜನವನ್ನು ಅರಿಯಬಹುದು. ಇಂಗ್ಲಿಷ್ ಭಾಷೆಯನ್ನು ಇಂಗ್ಲಿಷರಿಗೆ ಸಂಬಂಧಪಟ್ಟ ವಿಷಯ ಎಂದು ಮಾತ್ರ ತಿಳಿದರೆ ಸಾಲದು; ಅದು ಮುಂದುವರಿದ ಪಶ್ಚಿಮ ಜನಾಂಗಗಳಿಗೆಲ್ಲ ಸಂಬಂಧಪಟ್ಟ ವಿಷಯ. ಇಂಡಿಯಾ ದೇಶ ತನ್ನದೇ ಆದ ಭಾಷೆಯನ್ನೂ ಜ್ಞಾನವನ್ನೂ ಹೊಂದಿದೆ, ಬೇರೆ ಭಾಷೆಯನ್ನೇಕೆ ಅರಸಿಕೊಂಡು ಹೋಗಬೇಕು? ಎಂದು ಕೇಳುವುದಾದರೆ, ಅದಕ್ಕೆ ಉತ್ತರವಿದೆ: ಇಂಡಿಯದ ಜ್ಞಾನ ತನ್ನ ಅತ್ಯುಚ್ಛ್ರಾಯ ಸ್ಥಿತಿಯಲ್ಲಿ ಸಹಿತ ಅಪಕ್ವವಾಗಿದೆ; ಪಾಶ್ಚಾತ್ಯಜ್ಞಾನವಾದರೆ ಇಂದು ಪಕ್ವ ಸ್ಥಿತಿಯನ್ನು ಹೊಂದುತ್ತಲಿದೆ. ಯಾವ ಜ್ಞಾನಸಮುದಾಯವೇ ಆಗಲಿ, ನಾವು ಯಾವ ಸ್ಥಿತಿಯಲ್ಲಿದ್ದೇವೆ, ನಮ್ಮ ಕರ್ತವ್ಯವೇನು, ಈ ಪ್ರಪಂಚದಲ್ಲಿ ನಾವು ಮಾಡಬೇಕಾದದ್ದೇನು, ನಮ್ಮ ಹಕ್ಕುದಾರಿಗಳೇನು, ಎಂಬಿವೇ ಮೊದಲಾದ ವಿಷಯಗಳನ್ನು ತಿಳಿಸಬೇಕು. ಇಂಥ ಜ್ಞಾನವನ್ನು–ಅದು ನಮ್ಮ ದೇಶದಲ್ಲಿ ಹುಟ್ಟಿರಲಿ, ಪರದೇಶದಲ್ಲಿ ಹುಟ್ಟಿರಲಿ —ಈಗ ನಾವು ಅರಸಬೇಕಾಗಿದೆ. ಆ ಜ್ಞಾನ ಯುರೋಪಿನ ವಿದ್ಯೆಯಿಂದ ಈಗ

ಬಹು ಮಟ್ಟಿಗೆ ವಿದಿತವಾಗುತ್ತಿದೆ, ನನ್ನ ವಿನ್ಯೆಯಲ್ಲಾದರೆ ಅದರ ಸುಳಿವಿಲ್ಲ.... ಪಾಶ್ಚಾತ್ಯ ಜ್ಞಾನದಿಂದ ಇಂಡಿಯಾದ ಮೇಲೆ ಆಗಿರುವ ಪರಿಣಾಮವನ್ನು ಅಲ್ಲಗಳೆಯುವುದರ ಬದಲು ನಿಜವಾದ ಭಾರತಪ್ರೇಮಿಯು ಅದರ ವಿಷಯದಲ್ಲಿ ಸಂತೋಷಪಡುತ್ತಾನೆ. ಅಲ್ಲದೆ ತನ್ನ ಕೈಲಾಗುವ ಮಟ್ಟಿಗೆ ಆ ಜ್ಞಾನವನ್ನು ಸಂಪಾದಿಸಿಕೊಳ್ಳುತ್ತಾನೆ, ತನ್ನ ಹಕ್ಕುದಾರಿಗಳನ್ನು ತಿಳಿದುಕೊಳ್ಳುತ್ತಾನೆ, ಮತ್ತು ಆಧುನಿಕ ಜ್ಞಾನದ ಮೂಲಕ, ಸಾವಿರಾರು ವರ್ಷಗಳಿಂದ ತನ್ನ ದೇಶವನ್ನು ಸುತ್ತಿಕೊಂಡಿರುವ ಮೋಡವನ್ನು ನಿವಾರಿಸುತ್ತಾನೆ.

ರಾನಡೆ ಹೆಚ್ಚಾಗಿ ಓದುತ್ತಿದ್ದುದರಿಂದ ದೃಷ್ಟಿದೋಷದಿಂದ ಕೂಡಿದ್ದ ಅವರ ಕಣ್ಣುಗಳು ಈಗ ಕುರುಡಾಗಬಹುದಾಗಿ ತೋರಿತು. ೧೮೬೩ ರಲ್ಲಿ ಈ ತೊಂದರೆ ಆರಂಭವಾಯಿತು. ೧೮೬೪ ರಲ್ಲಿ ಡಾಕ್ಟರು ಕಣ್ಣುಗಳನ್ನು ಕೆಲವು ಕಾಲ ಉಪಯೋಗಿಸಲೇ ಬಾರದೆಂದು ಸಲಹೆ ಮಾಡಿದರು. ಬೆಳಗಿನ ಹೊತ್ತು ಯಾರಾದರೂ ಸ್ನೇಹಿತರು ರಾನಡೆಯವರನ್ನು ಡಾಕ್ಟರ ಮನೆಗೆ ಕರದೊಯ್ಯುತ್ತಿದ್ದರು. ಅಲ್ಲಿ ಕಣ್ಣಿನ ಹಸುರು ಬಂಧನಗಳನ್ನು ಬಿಚ್ಚಿ, ತೊಳೆದು, ಔಷಧ ಮುಲಾಮು ಹಾಕಿ, ತಿರುಗಿ ಬಂಧನಗಳನ್ನು ಕಟ್ಟುತ್ತಿದ್ದರು. ಹೀಗೆ ಆರು ತಿಂಗಳಕಾಲ ಕಳೆಯಿತು. ಸದಾ ಓದಲು ತವಕಪಡುತ್ತಿದ್ದ ರಾನಡೆಗೆ ಇದು ಎಂಥ ಕಷ್ಟದ ಕಾಲವಾಗಿತ್ತೆಂದು ಊಹಿಸಬಹುದು. ಜೊತೆಯ ವಿದ್ಯಾರ್ಥಿಗಳು ಅವರೊಡನಿದ್ದು ಅವರಿಗೆ ಬೇಕಾದ ವಿಷಯಗಳನ್ನು ಓದಿ ಹೇಳುತ್ತಾ ಅವರ ದುಃಖವನ್ನು ಸಾಧ್ಯವಾದ ಮಟ್ಟಿಗೆ ಕಡಮೆ ಮಾಡಿದರು. ಕಣ್ಣಿನ ತೊಂದರೆ ಅವರಿಗೆ ಕೊನೆಯವರೆಗೂ ಇದ್ದೇ ಇತ್ತು.

ರಾನಡೆಯಲ್ಲಿ ದೊಡ್ಡ ಪ್ರೊಫೆಸರಾಗುವಂಥ ಶಕ್ತಿಯಿತ್ತು. ೧೮೬೧ ರಲ್ಲಿ ಎಲ್ಫಿನ್‌ಸ್ಟನ್ ಕಾಲೇಜಿನಲ್ಲಿ ಅವರು ನೇಮಕ ಹೊಂದಿದರು. ಅಂದಿನಿಂದ ಅವರ ಜೀವನ ಉಪಾಧ್ಯಾಯವೃತ್ತಿಯಿಂದ ಮೊದಲಾಯಿತು. ಅವರು ಕೆಳತರಗತಿಗಳಿಗೆ ಚರಿತ್ರೆ, ಭೂವಿವರಣೆ, ಗಣಿತ, ಅರ್ಥಶಾಸ್ತ್ರ, ತರ್ಕ, ಇಂಗ್ಲಿಷ್ ಪ್ರಬಂಧ, ಇಂಗ್ಲಿಷ್ ಪದ್ಯ ಇವುಗಳನ್ನು ಬೋಧಿಸುತ್ತಿದ್ದರು. ಭೂವಿವರಣೆಯನ್ನು—ಚರಿತ್ರೆಯೊಡನೆ ಅದಕ್ಕಿರುವ ನಿಕಟ ಸಂಬಂದವನ್ನು ವಿವರಿಸುತ್ತ-ಆಕರ್ಷಕವಾಗಿ ಬೋಧಿಸುತ್ತಿದ್ದರಂತೆ. ಒಂದು ದೇಶದ ವಿಷಯವನ್ನು ಕುರಿತು ಪಾಠ ಹೇಳುವಾಗ ಆ ದೇಶದ ಮಹಾ ಪುರುಷರ ಕಥೆಗಳನ್ನೂ, ಅಲ್ಲಿನ ಭೌಗೋಲಿಕ ಪರಿಸ್ಥಿತಿಗಳನ್ನೂ ವಿವರಿಸುತ್ತಿದ್ದರಂತೆ.

೧೮೬೪ ರಲ್ಲಿ ಅವರು ಅರ್ಥಶಾಸ್ತ್ರವನ್ನು ಬೋಧಿಸಲು ಆರಂಭಿಸಿದರು.

ಚರಿತ್ರೆ ಅರ್ಥಶಾಸ್ತ್ರ ಇವೆರಡೂ ಅವರಿಗೆ ಬಹು ಇಷ್ಟವಾದ ವಿಷಯಗಳು. ಆ ಕಾಲದಲ್ಲಿ ಅರ್ಥಶಾಸ್ತ್ರ ವಿಷಯಗಳಲ್ಲಿ ಜಾನ್ ಸ್ಟ್ಯುಯರ್ಟ್ ಮಿಲ್ಲನದು ಅಧಿಕಾರವಾಣಿಯಾಗಿತ್ತು. ಮಿಲ್ಲನ ತತ್ತ್ವಗಳ ವಿಚಾರವಲ್ಲಿ ರಾನಡೆಯವರದು ತೀರ ವಿರೋಧಭಾವವಲ್ಲದಿದ್ದರೂ ಆತನ ತತ್ತ್ವಗಳನ್ನು ವಿಮರ್ಶಿಸುವಷ್ಟು ಸ್ವತಂತ್ರ ಮನೋಭಾವ ಅವರಲ್ಲಿತ್ತು. ಇಂಡಿಯಾ ದೇಶದಿಂದ ತೀರ ಭಿನ್ನವಾದ ಆರ್ಥಿಕ ಪರಿಸ್ಥಿತಿಗಳಲ್ಲಿ ರೂಪುಗೊಂಡ ಮಿಲ್ಲನ ತತ್ತ್ವಗಳನ್ನು ವಿವೇಚನೆಯಿಲ್ಲದೆ ಭಾರತಕ್ಕೆ ಅನ್ವಯಿಸುವುದು ಸರಿಯಲ್ಲವೆಂಬುದು ರಾನಡೆಯವರ ಮತ. ತಮ್ಮ ಪಕ್ವವಾದ ವಿವೇಚನೆಯಿಂದ ರಾನಡೆಯವರು ಈ ಅಭಿಪ್ರಾಯಕ್ಕೆ ಯಾವ ರೂಪುಕೊಟ್ಟರೆಂಬುದನ್ನು ನಾವು ಮುಂದೆ ನೋಡುತ್ತೇವೆ. ವಿದ್ಯಾರ್ಥಿಗಳು ಸಾಮಾನ್ಯವಾಗಿ ಮಿಲ್ಲನ ಗ್ರಂಥ ಒಂದನ್ನೇ ಓದುತ್ತಿದ್ದರು; ರ್ಯಾಂಸೆ, ಮ್ಯಾಲ್ಥುಸ್ ಮೊದಲಾದವರ ಗ್ರಂಥಗಳನ್ನೂ ಓದುವಂತೆ ರಾನಡೆ ಪ್ರೇರಿಸುತ್ತಿದ್ದರು.

ವಿದ್ಯಾರ್ಥಿಗಳನ್ನು ಪರೀಕ್ಷೆಗೆ ತಯಾರು ಮಾಡುವುದು ಮಾತ್ರ ಉಪಾಧ್ಯಾಯನ ಕೆಲಸವಲ್ಲ; ವಿಷಯುವನ್ನು ಬೋಧಿಸುವುದೂ ಅವನ ಕರ್ತವ್ಯ ಎಂದು ರಾನಡೆ ತಿಳಿದಿದ್ದರು. ಆದ್ದರಿಂದ ಅವರ ಬೋಧನ ಮಾರ್ಗ ಇತರರ ಮಾರ್ಗಗಳಿಂದ ಬೇರೆಯಾಗಿತ್ತು. ಪರೀಕ್ಷೆಯ ಕಾಲ ಬರುವವರೆಗೂ ಅವರು ಚರಿತ್ರೆ, ಅರ್ಥಶಾಸ್ತ್ರ, ತರ್ಕ ಮೊದಲಾದ ವಿಷಯಗಳಿಗೆ ಸಂಬಂಧಪಟ್ಟ ದೊಡ್ಡ ದೊಡ್ಡ ಗ್ರಂಥಗಳನ್ನು ಓದಿ ಹೇಳಿ ಅವುಗಳ ಸಾರಾಂಶವನ್ನು ಮನದಟ್ಟು ಮಾಡಿಕೊಡುತ್ತಿದ್ದರು; ಕಡೆಯಲ್ಲಿ ಪಠ್ಯ ಪುಸ್ತಕಗಳನ್ನು ಹೇಳುತ್ತಿದ್ದರು. ನಾನಾ ಮೂಲಗಳಿಂದ ತಾವು ಶೇಖರಿಸುತ್ತಿದ್ದ ಜ್ಞಾನ ಭಂಡಾರವನ್ನೆಲ್ಲ ವಿದ್ಯಾರ್ಥಿಗಳ ಮುಂದೆ ಇಡುತ್ತಿದ್ದರು. ವಿದ್ಯಾರ್ಥಿಗಳಲ್ಲಿ ಬಹುಮಂದಿ ಅದನ್ನೆಲ್ಲ ಜೀರ್ಣಿಸಿಕೊಳ್ಳಲು ಅಸಮರ್ಥರಾಗಿದ್ದರು. ತಮ್ಮ ಪಾಠ ಸಿದ್ಧತೆಯ ಮತ್ತು ಬೋಧನೆಯ ಪರಿಣಾಮ ಅಡಿಮೇಲಾದ ಪಾತ್ರೆಗೆ ನೀರು ಹುಯ್ದಂತೆ ಎಂದು ಅವರು ತಿಳಿದಿದ್ದರಂತೆ. ಆದರೆ ಇಂಥ ಧೀ ಶಕ್ತಿಯ ಗುರುವಿನ ಪ್ರಭಾವ ನಿಜವಾದ ವಿದ್ಯಾರ್ಥಿಗಳ ಮೇಲೆ ಬಹು ಪರಿಣಾಮಕಾರಿಯಾಗಿದ್ದಿರಬೇಕು.

೧೮೬೨ ರಲ್ಲಿ ಬಿ. ಎ., ಪಾಸಾದ ಕೂಡಲೆ ರಾನಡೆಯವರು ಮೆಟ್ರಿಕ್ಯುಲೇಷನ್ ಪರೀಕ್ಷೆಗೆ ಮರಾಠಿ ಭಾಷಾ ಪರೀಕ್ಷಕರಾಗಿ ನೇಮಿತರಾದರು.

ಪರೀಕ್ಷಕನ ಜವಾಬ್ದಾರಿಯನ್ನು ಮನಃಪೂರ್ವಕವಾಗಿ ನಿರ್ವಹಿಸುವುದಕ್ಕಾಗಿ ಅವರು "ಜ್ಞಾನೇಶ್ವರಿ"ಯ ಆರು ಅಧ್ಯಾಯಗಳನ್ನೂ "ನವನೀತ"ದ ಅನೇಕ ಭಾಗಗಳನ್ನೂ ಮೋರೋಪಂತರ ಕವಿತೆಗಳನ್ನೂ ಅಭ್ಯಾಸ ಮಾಡಿದರು. ಪ್ರಶ್ನ ಪತ್ರಿಕೆಗಳನ್ನು ತೃಪ್ತಿಕರವಾಗಿ ತಯಾರಿಸುವ ಉದ್ದೇಶದಿಂದ ನಿಯಮಿತ ಪಾಠಗಳನ್ನೆಲ್ಲ ವಿವರ ವಿವರವಾಗಿ ಅರಿತುಕೊಂಡರು.

ರಾನಡೆ ೧೮೬೬ ರಲ್ಲಿ ಮುಂಬಯಿ ಸರ್ಕಾರದ ಪೂರ್ವದೇಶ ಭಾಷಾ ಅನುವಾದಕರಾಗಿ ನೇಮಿತರಾದರು. ಮರಾಠಿಯಲ್ಲಿ ಪ್ರಕಟವಾದ ನೂತನ ಕೃತಿಗಳನ್ನು ಕುರಿತು ಸರ್ಕಾರಕ್ಕೆ ವರದಿ ಮಾಡುವುದು ಅವರ ಕೆಲಸವಾಗಿತ್ತು. ಇದರಿಂದ ಬೋಧನ ವೃತ್ತಿಯನ್ನು ಸ್ವಲ್ಪ ಕಾಲ ಬಿಡಬೇಕಾಯಿತು; ಪುಣೆಯಲ್ಲಿ ನಿಲ್ಲಬೇಕಾಯಿತು; ಕೆಲವು ಕಾಲದ ನಂತರ ಅಕಲ್ಕೋಟೆ ಸಂಸ್ಥಾನದ ಕಾರ್ಯಭಾರಿಯಾಗಿ ನೇಮಿತರಾದರು. ಅಲ್ಲಿಂದ ೧೮೬೭ ರಲ್ಲಿ ಕೊಲ್ಹಾಪುರ ಸಂಸ್ಥಾನಕ್ಕೆ ಜಡ್ಜಿಯಾಗಿ ಹೋದರು. ಅಕಲ್ಕೋಟೆ ಮತ್ತು ಕೊಲ್ಹಾಪುರಗಳಲ್ಲಿ ಕೆಲಸದಲ್ಲಿದ್ದ ಹಾಗೆಯೇ ಪೂರ್ವದೇಶ ಭಾಷಾನುವಾದಕರ ಕೆಲಸವನ್ನೂ ಎರಡು ವರ್ಷಗಳಕಾಲ ನೋಡಿದರು. ಅವರಿದ್ದಲ್ಲಿಗೇ ಪುಸ್ತಕಗಳನ್ನು ಕಳಿಸುತ್ತಿದ್ದರು; ಅಲ್ಲಿಂದಲೇ ಅವುಗಳ ವಿಷಯವಾಗಿ ವರದಿಯನ್ನು ಬರೆದು ಕಳಿಸುತ್ತಿದ್ದರು.

ಎಲ್ಫಿನ್‌ಸ್ಟನ್ ಕಾಲೇಜಿನಲ್ಲಿ ಇಂಗ್ಲಿಷಿನ ಮತ್ತು ಚರಿತ್ರೆಯ ಅಧ್ಯಾಪಕರಾಗಿ ನೇಮಿತರಾದ್ದರಿಂದ ೧೮೬೮ ರ ಮಾರ್ಚಿಯಲ್ಲಿ ಬೊಂಬಾಯಿಗೆ ಹಿಂದಿರುಗಿದರು. ಆ ಸಂದರ್ಭದಲ್ಲಿ ಅವರ ಶಿಷ್ಯರೂ ಹಳೆಯ ಸಹಪಾಠಿಗಳೂ ಸಹೋದ್ಯೋಗಿಗಳೂ ಸೇರಿ ಭಾರಿ ಸ್ವಾಗತ ಸಮಾರಂಭವನ್ನು ಏರ್ಪಡಿಸಿ ರಾನಡೆಯವರಿಗೆ ಚಿನ್ನದ ಗಡಿಯಾರವೊಂದನ್ನು ಅರ್ಪಿಸಿದರು. ಮುಂದಿನ ಎರಡೂವರೆ ವರ್ಷಗಳಲ್ಲಿ ಅವರು ತಮ್ಮ ಕಾಲೇಜಿನ ಕೆಲಸದ ಜೊತೆಗೆ, ಬೇರೆ ಬೇರೆ ಕಾಲಗಳಲ್ಲಿ, ತಾತ್ಕಾಲಿಕವಾಗಿ, ಸ್ಮಾಲ್ ಕಾಸಸ್ ಕೋರ್ಟಿನ ಜಡ್ಜಿಯಾಗಿ, ಪೋಲೀಸ್ ಮ್ಯಾಜಿಸ್ಟ್ರೇಟಾಗಿ, ಹೈಕೋರ್ಟ್ ಡೆಪ್ಯುಟಿಯಾಗಿ ಮತ್ತು ಹೈಕೋರ್ಟಿನ ಅಸಿಸ್ಟೆಂಟ್ ರಿಜಿಸ್ಟ್ರಾರರಾಗಿ ಕೆಲಸ ಮಾಡಿದರು. ೧೮೭೧ ರಲ್ಲಿ ಅವರು ಅಡ್ವೋಕೇಟ್ ಪರೀಕ್ಷೆಯಲ್ಲಿ ಪಾಸಾದರು. ಅದಾದ ಸ್ವಲ್ಪ ಕಾಲದಲ್ಲಿಯೆ ಬೊಂಬಾಯಿ ಸರ್ಕಾರದ ಜಡ್ಜಿಯಾಗಿ ನೇಮಿತರಾಗಿ ಕೆಲಸದ ಮೇಲೆ ಪುಣೆಗೆ ಹೋದರು.

## ೩. ಕಾಲಧರ್ಮದ ಪ್ರಭಾವ

ರಾನಡೆ ನಿಸ್ಸಂಶಯವಾಗಿ ತಮ್ಮ ಕಾಲದ ಶಿಶು. ಆ ಕಾಲದ ಅಂತಃಪ್ರವೃತ್ತಿಗಳೂ ಮನೋಧರ್ಮವೂ ಅವರ ಆಂತರಿಕ ಜೀವನವನ್ನು ರೂಪಿಸಿದುವು. ಪಾಶ್ಚಾತ್ಯ ವಿದ್ಯಾಭ್ಯಾಸ, ಬ್ರಿಟಿಷರ ನ್ಯಾಯಾಡಳಿತ ಪದ್ಧತಿ, ಕ್ರೈಸ್ತಮಿಷನರಿಗಳ ಪದ್ಧತಿಗಳು—ಇವುಗಳಿಂದ ಹಿಂದೂ ಸಮಾಜದಲ್ಲಿ ನೂತನ ಭಾವೋದ್ರೇಕ ಉಂಟಾಗಿತ್ತು. ಇದರ ಪರಿಣಾಮವಾಗಿ ಹಿಂದೂ ಸಮಾಜದ ಮುಂದಾಳುಗಳು ಬಾಲ್ಯ ವಿವಾಹ, ವಿಧವಾ ಪದ್ಧತಿ, ಅಸ್ಪೃಶ್ಯತೆ ಇವೇ ಮೊದಲಾದ ಪದ್ಧತಿಗಳ ವಿಷಯದಲ್ಲಿ ಅಸಮಾಧಾನ ಪಡಲಾರಂಭಿಸಿದ್ದರು. ಜನಸಾಮಾನ್ಯರಲ್ಲಿ ಕಂಡುಬರುವ ಅನಕ್ಷರತೆಯೂ ಸ್ತ್ರೀ ವಿದ್ಯಾಭ್ಯಾಸ ವಿಷಯದಲ್ಲಿದ್ದ ವಿರೋಧ ಮನೋಭಾವವೂ ಅವರಿಗೆ ಅಸಹನೀಯವಾಗಿ ತೋರಿದವು. ಜಾತಿ ಪದ್ಧತಿಯ ಹಲವು ಪರಿಣಾಮಗಳು ಅವರಿಗೆ ಮನವರಿಕೆಯಾದುವು. ವಿದೇಶ ಯಾತ್ರೆಗಿದ್ದ ವಿರೋಧ ಅರ್ಥವಿಲ್ಲದ್ದಾಗಿ ಕಂಡು ಬಂತು. ಧಾರ್ಮಿಕ ಪ್ರಪಂಚದಲ್ಲೂ ಕ್ಷೋಭೆ ತಲೆದೋರುತ್ತಿತ್ತು. ಅದರ ಪರಿಣಾಮ ಸುಧಾರಕ ಚಳವಳಿಗಳಲ್ಲೂ ನಾರಾಯಣ ಶೇಷಾದ್ರಿ, ಬಾಬಾ ಪದ್ಮಂಜೀ ಮೊದಲಾದಂಥವರು ಕ್ರೈಸ್ತ ಧರ್ಮವನ್ನು ಅವಲಂಬಿಸಿದ್ದರಲ್ಲಿಯೂ ತೋರ ತೊಡಗಿತ್ತು. ರಾನಡೆ ಬೊಂಬಾಯಿಗೆ ಬಂದಾಗ ಅಲ್ಲಿ 'ಪರಮ ಹಂಸ ಮಂಡಳಿ' ಯೆಂಬ ಒಂದು ಸಂಘವಿತ್ತು. ದಾದೋಬಾ ಪಾಂಡುರಂಗ್ ಎಂಬಾತನು ಅದನ್ನು ೧೮೪೦ ರಲ್ಲಿ ಸ್ಥಾಪಿಸಿದ್ದನು. ಜಾತಿಪದ್ಧತಿಯನ್ನು ನಿರ್ಮೂಲ ಮಾಡುವುದೂ, ವಿಧವಾ ವಿವಾಹ ಪದ್ಧತಿಯನ್ನು ಆಚರಣೆಗೆ ತರುವುದೂ, ವಿಗ್ರಹಾರಾಧನೆಯನ್ನು ತ್ಯಜಿಸುವುದೂ ಸಂಘದ ಉದ್ದೇಶಗಳಾಗಿದ್ದವು. ಪ್ರತಿ ಸಭೆಯೂ ಪ್ರಾರ್ಥನೆಯಿಂದ ಆರಂಭವಾಗಿ ಪ್ರಾರ್ಥನೆಯಿಂದ ಮುಕ್ತಾಯವಾಗುತ್ತಿತ್ತು. "ಪ್ರಾರ್ಥನಾ ಸಮಾಜ" ಇದರ ಅವಶೇಷದಿಂದ ಹುಟ್ಟಿತೆನ್ನಬಹುದು.

ಹಿಂದೂ ಸಾಮಾಜಿಕ ಧಾರ್ಮಿಕ ವಲಯಗಳಲ್ಲಿ ಪಾಶ್ಚಾತ್ಯ ಭಾವಗಳ ಪ್ರಭಾವವನ್ನು ಬಹುಮಟ್ಟಿಗೆ ಬೀರಿದವನು ಬಂಗಾಳದ ಸುಪ್ರಸಿದ್ಧ ಸುಧಾ

ರಕನೂ ಬ್ರಾಹ್ಮೋ ಸಮಾಜ ಸ್ಥಾಪಕನೂ ಆದ ರಾಮ ಮೋಹನ ರಾಯ್. ಸತೀ ಮೊದಲಾದ ಕ್ರೂರ ಪದ್ಧತಿಗಳನ್ನು ನಿಲ್ಲಿಸಿ, ಹಿಂದೂ ಧರ್ಮವನ್ನು ಹಿಂದಿನ ಶುದ್ಧ ವೈದಿಕ ಏಕೋ ದೇವ ಪಂಥಕ್ಕೆ ಒಯ್ಯಲು ಶ್ರಮಿಸಿದ ರಾಮಮೋಹನನನ್ನು ರಾನಡೆ ರಾಷ್ಟ್ರ ಜೀವನದ ಪ್ರವಾಹವನ್ನು ಸರಿಯಾದ ಮಾರ್ಗದಲ್ಲಿ ಹರಿಸಿದ ಮಹಾನುಭಾವನೆಂದು ಭಾವಿಸಿದ್ದರು. ಆತನನ್ನು ಸಭೆಸಮಿತಿಗಳ ಕಾಂಗ್ರೆಸ್ ಯುಗಕ್ಕೆ ಮೊದಲೆ ಜನಿಸಿದ ದೇಶಾಭಿಮಾನಿ ಯೆಂದು ತಿಳಿದಿದ್ದರು. ರಾನಡೆ ಹುಟ್ಟುವ ವೇಳೆಗೆ ರಾಮ ಮೋಹನ ರಾಯ್ ಗತಿಸಿ ಏಳು ವರ್ಷಗಳಾಗಿತ್ತು. ತರುಣ ರಾನಡೆ ರಾಮಮೋಹನನಂತೆ ಸುಧಾರಣೆಯ ಉತ್ಸಾಹದಿಂದ ಕೂಡಿದ ಬಹು ಮಂದಿ ಹಿರಿಯರನ್ನು ಬೊಂಬಾಯಲ್ಲಿ ಸಂಧಿಸಿದರು. ಅವರಲ್ಲಿ ಮುಖ್ಯರಾದವರೆಂದರೆ,— ದಾದೋಬಾ ಪಾಂಡುರಂಗ್ ಮತ್ತು ಬಾಳ ಶಾಸ್ತ್ರೀ ಜಾಂಭೇಕರ್ : ಇವರಿಬ್ಬರೂ ವಿದ್ಯಾಭ್ಯಾಸವನ್ನು ಹರಡುವುದರಲ್ಲಿ ಉತ್ಸುಕರಾಗಿದ್ದರು ; ನಾನಾ ಶಂಕರ ಶೇಟ್ : ಈತನು ಜನಪ್ರಿಯನಾದ ಮುಂದಾಳಾಗಿದ್ದನು, ಹೋಳೀ ಹಬ್ಬದ ಸಂದರ್ಭದಲ್ಲಿ ನಡೆಯುತ್ತಿದ್ದ ಅಶ್ಲೀಲಯುತ ಆಚಾರಗಳನ್ನು ನಿಲ್ಲಿಸಿದ್ದನು, ಇಂಗ್ಲಿಷ್ ವಿದ್ಯಾಪ್ರಚಾರಕ್ಕಾಗಿ ಶ್ರಮಿಸಿದ್ದನು ; ವಿಷ್ಣು ಶಾಸ್ತ್ರೀ ಪಂಡಿತ್ : ಬಂಗಾಳದಲ್ಲಿ ವಿಧವೆಯರ ಸ್ಥಿತಿಯನ್ನು ಸುಧಾರಿಸಲು ವಿದ್ಯಾಸಾಗರನು ಕಷ್ಟಪಟ್ಟಿದ್ದಂತೆ ಈತನು ಪಶ್ಚಿಮ ಇಂಡಿಯಾದಲ್ಲಿ ಶ್ರಮಿಸುತ್ತಿದ್ದನು ; ಡಾ. ಭಾಊದಾಜೀ ಮೊದಲಾದ ಚರಿತ್ರ ಸಂಶೋಧಕರು : ಇವರು ಭಾರತದ ಪುರಾತನ ವೈಭವವನ್ನೂ ಇಂದಿನ ಅವನತ ಸ್ಥಿತಿಯನ್ನೂ ಸದಾ ಮನವರಿಕೆ ಮಾಡಿಕೊಡುತ್ತಿದ್ದರು. ರಾನಡೆಯವರ ವಿದ್ಯಾರ್ಥಿದಶೆಯಲ್ಲಿ ದಾದಾಭಾಯಿ ನವರೋಜಿ ಇಂಗ್ಲೆಂಡಿನಲ್ಲಿದ್ದರು. ಆ ರಾಜಕೀಯ ಮುಂದಾಳು ಎಸಗುತ್ತಿದ್ದ ಕಾರ್ಯಗಳನ್ನು ರಾನಡೆ ಗಮನಿಸುತ್ತಿದ್ದರು. ಕೇಶವಚಂದ್ರಸೇನರ ಉಜ್ಜ್ವಲವಾದ ಧಾರ್ಮಿಕ ಭಾಷಣಗಳನ್ನು ಅವರು ಅನೇಕ ವೇಳೆ ಕೇಳಿರಬೇಕು. ಕಾಲಧರ್ಮದ ಪ್ರವಾಹ ಇಂಥ ಮಹನೀಯರ ಮೂಲಕ ರಾನಡೆಯವರ ಆತ್ಮವನ್ನು ಸೇರಿತು.

ರಾನಡೆ ಕಾಲೇಜನ್ನು ಸೇರಿದಾಗ " ಜ್ಞಾನಪ್ರಸಾರಕ ಸಭಾ " ಎಂಬ ಸಂಸ್ಥೆ ಪ್ರವರ್ಧಮಾನವಾಗಿತ್ತು ಬೊಂಬಾಯಿಯಲ್ಲಿ. ರಾನಡೆ ಸಂಸ್ಥೆಯ ಸದಸ್ಯರಾಗಿ ಕೆಲವು ಪ್ರಬಂಧಗಳನ್ನು ಅಲ್ಲಿ ಓದಿದರು : " ವಿದ್ಯಾವಂತ

ತರುಣರ ಕರ್ತವ್ಯಗಳು" (೧೮೫೯); "ಮರಾಠಾ ರಾಜರು ಮತ್ತು ಶ್ರೀಮಂತರು" (೧೮೬೦); "ಜನಸಂಖ್ಯೆಯು ಬೆಳವಣಿಗೆಯ ದುಷ್ಪರಿಣಾಮಗಳು" (೧೮೬೪). 'ಇಂದು ಪ್ರಕಾಶ' ಪತ್ರಿಕೆಯ ಸಂಪಾದಕರಾಗಿದ್ದಾಗ ಅದರಲ್ಲಿ ಹಿಂದೂ ವಿಧವೆಯ ಪರವಾಗಿ ವಾದಿಸಿದ್ದರು. ೧೮೬೬ ರಲ್ಲಿ ಸ್ಥಾಪಿತವಾದ ಹಿಂದೂ ವಿಧವಾ-ವಿವಾಹ ಸಂಘದ ಸದಸ್ಯರಾಗಿದ್ದರು. ಸಂಘದ ಪರವಾಗಿ ದಖನೀ ಗುಜರಾತೀ ಬ್ರಾಹ್ಮಣರಲ್ಲಿ ಅನೇಕ ವಿಧವಾ-ವಿವಾಹಗಳು ನಡೆದವು. ಅವುಗಳಲ್ಲಿ ಮೊದಲನೆಯ ವಿವಾಹ ನಡೆದಾಗ ಮಠಾಧಿಪತಿಗಳು ವಿಷ್ಣುಶಾಸ್ತ್ರೀ ಪಂಡಿತ್, ರಾನಡೆ ಮತ್ತು ಐವರು ಪ್ರಮುಖ ಸದಸ್ಯರಿಗೆ ಬಹಿಷ್ಕಾರ ಹಾಕಿದರು. ಒಬ್ಬಿಬ್ಬರು ಶರಣಾದರು. ರಾನಡೆ ಹೆದರದೆ ತಮ್ಮ ಚಳವಳಿಯ ಕಾರ್ಯವನ್ನು ಮುಂದುವರಿಸಿದರು. ಉತ್ತಮಸ್ಥಾನದಲ್ಲಿದ್ದುದರಿಂದಲೂ ಉದಾರಭಾವದ ಸ್ನೇಹಿತರಿದ್ದುದರಿಂದಲೂ ಅವರಿಗೆ ಬಹಿಷ್ಕಾರದಿಂದ ಹೆಚ್ಚು ತೊಂದರೆಯಾಗಲಿಲ್ಲ. ಅವರ ಧೀರವರ್ತನೆಯಿಂದ ಚಳವಳಿಗೆ ಬೆಂಬಲ ಸಿಕ್ಕಿತು.

ಡಾ. ಭಂಡಾರ್ಕರ್, ವಿ. ಎ. ಮೋಡಕ್ ಮೊದಲಾದವರಂತೆ ರಾನಡೆಯೂ ಸಹ, ಪೂರ್ವಿಕರ ಹಿಂದೂಮತದಿಂದ ತೀರ ಭಿನ್ನವಾಗಿರದ, ಆದರೆ ಆಧುನಿಕನ ಹೃದಯ ಮನಸ್ಸುಗಳನ್ನು ತೃಪ್ತಿಪಡಿಸುವ, ಮತಧರ್ಮವನ್ನು ಬಯಸುತ್ತಿದ್ದರು. ಬ್ರಾಹ್ಮೊ ಸಮಾಜದ ಶ್ರದ್ಧಾಳುವಾದ ಕೇಶವಚಂದ್ರಸೇನ್ ಎರಡನೆಯ ಬಾರಿ ಬೊಂಬಾಯಿಗೆ ಬಂದ ಉತ್ಸಾಹದ ಸಂದರ್ಭದಲ್ಲಿ—ಎಂದರೆ ೧೮೬೭ ರ ಮಾರ್ಚಿಯಲ್ಲಿ ಸ್ಥಾಪಿತವಾದ "ಪ್ರಾರ್ಥನಾ ಸಮಾಜ" ದಲ್ಲಿ ಅವರಿಗೆ ಒಂದು ನೆಲೆ ದೊರೆಯಿತು. ಮೊದಲಿನಿಂದಲೂ ಈ ಸಂಘದೊಡನೆ ರಾನಡೆ ನಿಕಟ ಸಂಬಂಧವನ್ನು ಹೊಂದಿದ್ದರು. ಮುಂದೆ ಅದರ ಸೂತ್ರಗಳನ್ನು ರೂಪಿಸುವುದರಲ್ಲಿ ಅವರ ಕೈವಾಡ ಬಹುವಾಗಿತ್ತು.

ಭಾರತ ಚರಿತ್ರೆಯ ಒಂದು ಸಂಧಿಕಾಲದಲ್ಲಿ—ಧಾರ್ಮಿಕ ರಾಜಕೀಯ ಮತ್ತು ಸಾಮಾಜಿಕ ಸಂಧಿಕಾಲದಲ್ಲಿ—ರಾನಡೆ ರಂಗದ ಮೇಲೆ ಬಂದರು. ಪುರಾತನವಾದ ಪೂರ್ವನಾಗರಿಕತೆಯ ಆಗಸದ ಮೇಲೆ ಪಾಶ್ಚಾತ್ಯ ಭಾವ ಸೂರ್ಯನು ಬಣ್ಣದ ಕಿರಣಗಳನ್ನು ಎರಚುತ್ತಿದ್ದನು. ಭಾರತದ ನಿಜ ಸುತನಾಗುಳಿದು ಪಾಶ್ಚಾತ್ಯ ಶಿಕ್ಷಣವನ್ನು ಹೊಂದಿದ ಇವರು ಈ ಸಂಧಿಕಾಲ

ದಲ್ಲಿ ಯಾವ ಘರ್ಷಣೆಯೂ ಇಲ್ಲದೆ ನೂತನ ದೃಷ್ಟಿಯ ಪ್ರಪಂಚವನ್ನು ಸೇರಿ ನವ ಅರುಣೋದಯದ ದೂತರಾದರು.

ಕಾಲೇಜಿನ ಅವಧಿ ಮುಗಿದ ಕಾಲದಿಂದ ಹಿಡಿದು ಮೃತ್ಯು ಸನ್ನಿಹಿತವಾಗುವವರೆಗೆ ರಾನಡೆ ತಮ್ಮ ಶಕ್ತಿಗಳನ್ನೆಲ್ಲ ಆದರ್ಶ ಸಾಧನೆಗಾಗಿ ಉಪಯೋಗಿಸಿದರು. ನಾಲ್ಕು ಮಹಾ ಧ್ಯೇಯಗಳನ್ನು–ತಾಯ್ನಾಡಿನ ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಧಾರ್ಮಿಕ ಪ್ರಗತಿಗಳನ್ನು–ಸಾಧಿಸಲು ಅಕಲುಷಿತವಾದ ದೃಷ್ಟಿಯಿಂದಲೂ ಅಪೂರ್ವವಾದ ಶ್ರದ್ಧಾಸಕ್ತಿಗಳಿಂದಲೂ ಪ್ರಯತ್ನ ನಡಸಿದರು. ೧೮೭೧ ರವರೆಗೆ ಅವರು ಕೆಲಸ ಕಲಿಯುತ್ತಿರುವವರಂತೆ ತೋರುತ್ತಾರೆ. ಆ ನಂತರ ತಮ್ಮ ಹತ್ಯಾರುಗಳನ್ನು ಕುಶಲ ಕಸಬುದಾರನಂತೆ ದೇಶದ ಭವಿಷ್ಯ ನಿರ್ಮಾಣದಲ್ಲಿ ಉಪಯೋಗಿಸುತ್ತಾರೆ. ಅವರ ಸುಧಾರಣಾಸಕ್ತಿಗಳು ಇಲ್ಲಿಂದ ಮುಂದೆ ಸ್ಪಷ್ಟವಾಗಿ ಗೋಚರಿಸುತ್ತವೆ. ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ಅವರು ತಮ್ಮ ಆಲೋಚನಾ ಪ್ರಭಾವವನ್ನು ಹೇಗೆ ಬೀರಿ ಕಾರ್ಯಗತ ಮಾಡಿದರೆಂಬುದು ಮುಂದಿನ ಚರಿತೆಯ ವಿಷಯವಾಗುತ್ತದೆ. ದೇಶವನ್ನು ಹಳೆಯ ಮಾರ್ಗದಿಂದ ನೂತನ ಮಾರ್ಗಕ್ಕೆ ಒಯ್ಯುತ್ತಿದ್ದ ಈ ದೇಶಾಭಿಮಾನಿಯ ಆದರ್ಶಸಾಧನೆಯ ಕಾರ್ಯದಲ್ಲಿ ಒದಗಿ ಬಂದ ಸಂಸಾರ ಸಂಬಂಧವಾದ ಮತ್ತು ಉದ್ಯೋಗಸಂಬಂಧವಾದ ಘರ್ಷಣೆಗಳು ಅವರ ಜೀವನದ ಮುಖ್ಯ ಸಂಗತಿಗಳಾಗುತ್ತವೆ. ಬೇರೆಬೇರೆ ಸಂದರ್ಭಗಳಲ್ಲಿ ಬೇರೆಬೇರೆ ರೀತಿಯಿಂದ ಕಾಣಿಸಿಕೊಂಡ ಆ ಘರ್ಷಣೆಗಳನ್ನು ಅವರು ಎದುರಿಸಿದ ರೀತಿಯಿಂದ ಅವರ ಗುಣ ಸ್ಪಷ್ಟವಾಗಿ ಎದ್ದುಕಾಣುತ್ತದೆ.

## ೪. ಸಾರ್ವಜನಿಕ ಸಭಾ

ರಾನಡೆ ೧೮೭೧ ರ ನವೆಂಬರ್‌ನಲ್ಲಿ ಒಂದನೇ ತರಗತಿಯ ಒಂದನೇ ದರ್ಜೆಯ ಸಬಾರ್ಡಿನೇಟ್ ಜಡ್ಜರಾಗಿ ಪುಣೆಗೆ ಹೋದರು. ಅವರ ಸಂಬಳ ತಿಂಗಳಿಗೆ ರೂ. ೮೦೦. ಮೊದಲು ಹಂಗಾಮಿಯಾಗಿ ಹೋದರು; ೧೮೭೩ ರಲ್ಲಿ ಕೆಲಸ ಖಾಯಂ ಆಯಿತು. ಆಗ ಅವರಿಗೆ ಮೂವತ್ತು ವರ್ಷಗಳ ವಯಸ್ಸು ಕೂಡ ಆಗಿರಲಿಲ್ಲ. ನ್ಯಾಯೋದ್ಯೋಗದ ಆರಂಭದಲ್ಲಿಯೇ ಅವರಿಗೆ ಈ ದೊಡ್ಡ ಪದವಿ ದೊರೆತಿತ್ತು. ಅಪೀಲುಗಳನ್ನು ಇತ್ಯರ್ಥ ಮಾಡುವ ಅಧಿಕಾರವನ್ನೂ ಮೊದಲ ಬಾರಿಗೆ ಅವರಿಗೆ ವಹಿಸಿ ಸರ್ಕಾರ ಅವರಲ್ಲಿ ತಮಗಿರುವ ನಂಬಿಕೆಯನ್ನು ವ್ಯಕ್ತಪಡಿಸಿದ್ದರು. ಅವರ ತೀರ್ಪುಗಳಲ್ಲಿ, ಕೇಸಿನ ಪೂರ್ಣ ಸಮಾಲೋಕನ, ಸಾವಧಾನತೆ, ವಿವರಗಳ ಪರಿಶೀಲನೆ, ದಾಖಲೆಗಳ ಸೂಕ್ಷ್ಮ ಪರೀಕ್ಷೆ, ವಾಸ್ತವಾಂಶಗಳ ಚೊಕ್ಕನಿರೂಪಣೆ, ರುಜುವಾತುಗಳ ಸರಿಯಾದ ಗ್ರಹಿಕೆ, ವಿವಾದಾಂಶಗಳ ದೀರ್ಘ ಆವಿಷ್ಕಾರ, ಕಡೆಯ ನಿರ್ಣಯಕ್ಕೊಯ್ಯುವ ತರ್ಕಬದ್ಧವಾದ ಸರಣಿ–ಈ ಗುಣಗಳು ಕಂಡು ಬರುತ್ತಿದ್ದುವು. ಅವರ ತೀರ್ಪುಗಳು ಅನೇಕ ವೇಳೆ ಹೈಕೋರ್ಟಿನ ಮೆಚ್ಚುಗೆಯನ್ನು ಪಡೆದುವು.

ರಾನಡೆ ಪುಣೆಗೆ ಬರುವುದಕ್ಕೆ ಒಂದು ವರ್ಷ ಮುಂಚೆ ಅಲ್ಲಿ ಸಾರ್ವಜನಿಕ ಸಭಾ ಎಂಬ ಸಂಘ ಸ್ಥಾಪಿತವಾಗಿತ್ತು. ಜನರ ಅಗತ್ಯಗಳನ್ನೂ ಆಶಯಗಳನ್ನೂ ಸರ್ಕಾರಕ್ಕೆ ತಿಳಿಸುವುದು ಸಂಘದ ಉದ್ದೇಶವಾಗಿತ್ತು. ಜಮೀನ್ದಾರರು, ಸಾಹುಕಾರರು, ವರ್ತಕರು, ಸರ್ಕಾರದ ನಿವೃತ್ತ ಅಧಿಕಾರಿಗಳು, ವಕೀಲರು, ಪ್ರೊಫೆಸರುಗಳು, ದಕ್ಷಿಣ ಮಹಾರಾಷ್ಟ್ರ ಸೀಮೆಯ ಬಹುಮಂದಿ ದೊರೆಗಳು–ಹೀಗೆ ಪ್ರಭಾವಶಾಲಿಗಳಾದ ಅನೇಕ ಜನರು ಸಂಘದ ಸದಸ್ಯರಾಗಿದ್ದರು. ತಮ್ಮ ಸಾಮಾಜಿಕ ಪ್ರಜ್ಞೆಯನ್ನು ವ್ಯಕ್ತಗೊಳಿಸಲು ಇದು ಸರಿಯಾದ ಸಂಸ್ಥೆಯೆಂದು ರಾನಡೆಯವರಿಗೆ ತೋರಿತು. ಅವರು ಪುಣೆಗೆ ಬಂದಕೂಡಲೇ ಸಂಘದ ಸದಸ್ಯರಾಗಿ ಅದರ ವ್ಯವಹಾರಗಳನ್ನು ತಮ್ಮ ಹತೋಟಿಗೆ ತೆಗೆದುಕೊಂಡರು. ಮುಂದಿನ ೨೨ ವರ್ಷಗಳು ಅವರು ಸಂಘದ ಜೀವಾಳವಾಗಿದ್ದರು. ಸಂಘದ ಮೂಲ ಸಂಸ್ಥಾ

ಪಕರು ಗಣೇಶ ವಾಸುದೇವ ಜೋಶಿ. ಜನ ಅವರನ್ನು ವಿಶ್ವಾಸದಿಂದ 'ಸಾರ್ವಜನಿಕ ಮಾಮಾ' ಎಂದು ಕರೆಯುತ್ತಿದ್ದರು. ರಾನಡೆ ಜೋಶಿಯೊಡನೆ ಕೈಜೋಡಿಸಿ ಕೆಲಸಮಾಡಿದರು. ಜೋಶಿ ಸಂಘದ ಕ್ರಿಯಾಶಕ್ತಿಯಾದರೆ ರಾನಡೆ ಅದರ ಧೀಶಕ್ತಿಯಾಗಿದ್ದರು. ಪಶ್ಚಿಮ ಇಂಡಿಯಾದಲ್ಲಿ ಜನ ಜಾಗೃತಿಯನ್ನು ಉಂಟುಮಾಡುವುದರಲ್ಲೂ, ರಾಜಕೀಯ ಸಾಮಾಜಿಕ ಆರ್ಥಿಕ ವಿಚಾರಗಳಲ್ಲಿ ಸಾರ್ವಜನಿಕಾಭಿಪ್ರಾಯವನ್ನು ರೂಪಿಸುವುದರಲ್ಲೂ ಸಂಘ ಪ್ರಮುಖಪಾತ್ರವನ್ನು ವಹಿಸಿತು.

ಇಂಡಿಯಾ ದೇಶದ ಹಣಕಾಸಿನ ಸ್ಥಿತಿಯನ್ನು ಪರೀಕ್ಷಿಸುವುದಕ್ಕಾಗಿ ಗ್ಲಾಡ್‌ಸ್ಟನ್ ೧೮೭೧ರಲ್ಲಿ ಪಾರ್ಲಿಮೆಂಟರಿ ಸಮಿತಿಯೊಂದನ್ನು ನೇಮಕ ಮಾಡಿದರು. ಅದು ಫಾಸೆಟ್ ಕಮಿಟಿಯೆಂದು ಹೆಸರಾಗಿದೆ. ಇಂಡಿಯಾ ದೇಶದ ಬಡತನವನ್ನೂ ಇಲ್ಲಿಯ ತೆರಿಗೆಯ ಹೊರೆಯನ್ನೂ ತಿಳಿಸುವ ಸಲುವಾಗಿ ದಾದಾಭಾಯಿ ನವರೋಜಿ ಸಮಿತಿಯ ಮುಂದೆ ಸಾಕ್ಷ್ಯವಿತ್ತರು. ೧೮೭೨ ರಲ್ಲಿ ಸಾರ್ವಜನಿಕ ಸಭಾ—ಸಮಿತಿಯ ವರದಿಗೆ ಪೂರಕವಾಗಿರಲೆಂಬ ಅಥವಾ ಅದರ ದೋಷಗಳನ್ನು ತಿದ್ದಲೆಂಬ ಉದ್ದೇಶದಿಂದ—ಮಹಾರಾಷ್ಟ್ರ ಜಿಲ್ಲೆಯ ಆರ್ಥಿಕ ಸ್ಥಿತಿಗಳನ್ನು ಪರೀಕ್ಷಿಸುವ ಒಂದು ನಿರ್ಣಯ ಮಾಡಿತು. ೧೮೭೩ ರಲ್ಲಿ ಈ ವರದಿ ಚಿಕ್ಕಪುಸ್ತಕ ರೂಪದಲ್ಲಿ ಪ್ರಕಟವಾಯಿತು. ಹೀಗೆ ಶೋಧನೆಯನ್ನು ನಡೆಸಿ ವರದಿಯನ್ನು ಪ್ರಕಟಿಸುವುದರ ಮೂಲಕ ರಾನಡೆ ದೇಶಬಾಂಧವರಿಗೆ ಒಂದು ವಿಷಯವನ್ನು ಕಲಿಸಿದರು. ಮೌನವಾಗಿ ದಾಸಾನುದಾಸರಂತೆ ಸರ್ಕಾರದ ಕೈ ಕಾದು ಕುಳಿತುಕೊಳ್ಳುವುದರ ಬದಲು ನಾವೇ ಸ್ವತಂತ್ರವಾಗಿ ನಮ್ಮ ಕಷ್ಟಗಳಿಗೆ ಕಾರಣಗಳನ್ನು ಕಂಡುಹಿಡಿದು ಪರಿಹಾರೋಪಾಯಗಳನ್ನು ಸೂಚಿಸುವುದು ಹೇಗೆಂಬುದನ್ನು ತೋರಿಸಿಕೊಟ್ಟರು. ಅಹಮ್ಮದ್ ನಗರ ಮತ್ತು ಸೋಲಾಪುರ ಜಿಲ್ಲೆಗಳಲ್ಲಿನ ಕಷ್ಟಪರಿಸ್ಥಿತಿಗೆ ಸರಕಾರದ ಭೂನೀತಿಯೇ ಕಾರಣವೆಂದು ವರದಿ ಸ್ಪಷ್ಟಪಡಿಸಿತು. ಅದರ ಪರಿಣಾಮವಾಗಿ ಸರ್ಕಾರ ಸಭೆಯ ಚಟುವಟಿಕೆಗಳಲ್ಲಿ ತೀವ್ರವಾದ — ಆದರೆ ಅಷ್ಟೇನೂ ಅನುಕೂಲವಲ್ಲದ — ಆಸಕ್ತಿಯನ್ನು ತೋರ್ಪಡಿಸಿತು.

ಪಾರ್ಲಿಮೆಂಟರಿ ಸಮಿತಿ ನಾಲ್ಕು ವರ್ಷಗಳ ಕಾಲ ಕೆಲಸ ಮಾಡಿ ಮುಕ್ತಾಯಗೊಂಡಿತು. ಸಮಿತಿಯ ವರದಿ ೩೫೦೦ ಪುಟಗಳಷ್ಟು ದೊಡ್ಡ

ದಾಗಿ ನಾಲ್ಕು ಸಂಪುಟಗಳಲ್ಲಿತ್ತು. ರಾನಡೆ ಅದನ್ನು ಸಂಗ್ರಹಿಸಿ ಪರಿಷ್ಕರಿಸಿ ಅದಕ್ಕೆ ಹೆಚ್ಚಿನ ವಿಷಯಗಳನ್ನು ಸೇರಿಸಿ, "ಬ್ರಿಟಿಷ್ ಇಂಡಿಯಾ ಸಾಮ್ರಾಜ್ಯದ ರೆವಿನ್ಯೂ ಕೈಪಿಡಿ" ಎಂಬ ಹೆಸರಿನಿಂದ ೧೮೭೭ರಲ್ಲಿ ಪುಸ್ತಕ ರೂಪದಲ್ಲಿ ಪ್ರಕಟಿಸಿದರು. ಸಮಿತಿಯ ಮುಂದೆ ಸಾಕ್ಷ್ಯ ಕೊಡಲು ರಾನಡೆ ಇಂಗ್ಲೆಂಡಿಗೆ ಆಹ್ವಾನಿಸಲ್ಪಟ್ಟಿದ್ದರು. ಆದರೆ ಸಮಿತಿ ಇದ್ದಕಿದ್ದಂತೆ ಮುಕ್ತಾಯಗೊಂಡದ್ದರಿಂದ ರಾನಡೆ ಅಲ್ಲಿಗೆ ಹೋಗಲಿಲ್ಲ.

ಜವಾಬ್ದಾರಿಯುತ ಸ್ವಯಂ ಆಡಳಿತ ಪದ್ಧತಿಯನ್ನು ಕುರಿತು ೧೮೭೪ರಲ್ಲಿ ರಾನಡೆ ಒಂದು ಅರ್ಜಿಯನ್ನು ತಯಾರಿಸಿ ಅದರ ನಕಲುಗಳನ್ನು ಪಾರ್ಲಿಮೆಂಟಿಗೂ, ಸರ್ಕಾರದ ಮುಖ್ಯ ಅಧಿಕಾರಿಗಳಿಗೂ, ವರ್ತಮಾನ ಪತ್ರಿಕೆಗಳಿಗೂ ಕಳಿಸಿಕೊಟ್ಟರು. ಪಾರ್ಲಿಮೆಂಟಿನಲ್ಲಿ ಇಂಡಿಯಾದ ಪ್ರತಿನಿಧಿಗಳಿರಬೇಕೆಂದೂ ಅವರ ಅನುಮತಿಯಿಂದ ಇಂಡಿಯಾ ಪ್ರಶ್ನೆಗಳು ಇತ್ಯರ್ಥವಾಗಬೇಕೆಂದೂ ಅರ್ಜಿಯಲ್ಲಿ ಸೂಚಿಸಲಾಗಿತ್ತು. ಈ ಸಲಹೆಗೆ ಜನಬೆಂಬಲವಿದೆಯೆಂದು ತೋರಿಸಲು ರಾನಡೆ ಅರ್ಜಿಗೆ ಸಾವಿರಾರು ಜನರ ಸಹಿಗಳನ್ನು ಸಂಗ್ರಹಿಸಿದ್ದರು. ಸರ್ಕಾರ ತಮ್ಮ ಅರ್ಜಿಯನ್ನು ನಡಸಿಕೊಡುವರೆಂದೇನೂ ರಾನಡೆ ತಿಳಿದಿರಲಿಲ್ಲ; ಆದರೆ ಅಂಥ ಅರ್ಜಿಗಳಿಂದ ಸ್ವರಾಜ್ಯ ವಿಷಯದಲ್ಲಿ ಜನಜಾಗೃತಿಯುಂಟಾಗುತ್ತದೆಯೆಂದು ತಿಳಿದಿದ್ದರು. ಜನರ ರಾಜಕೀಯ ಶಿಕ್ಷಣದಲ್ಲಿ ಅವು ಮೊದಲ ಹಂತಗಳೆಂದು ಭಾವಿಸಿದ್ದರು.

೧೮೭೭ ರಲ್ಲಿ ನಡೆದ ದೆಹಲಿ ದರ್ಬಾರಿನ ಸಂದರ್ಭದಲ್ಲಿ ಸಾರ್ವಜನಿಕ ಸಭಾದ ಆಶ್ರಯದಲ್ಲಿ ಪುಣೆಯ ಸಾರ್ವಜನಿಕರ ಸಭೆ ಸೇರಿತು. ಸಭೆಯ ಪರವಾಗಿ ರಾಜಭಕ್ತಿಯುತವಾದ ಬಿನ್ನವತ್ತಳೆಯೊಂದನ್ನು ರಾಣಿ–ಸರ್ಕಾರಕ್ಕೆ ಕಳಿಸಲಾಯಿತು. ಬಿನ್ನವತ್ತಳೆಯನ್ನು ರಾನಡೆ ತಯಾರಿಸಿದ್ದರು. ಬಿನ್ನವತ್ತಳೆಯಲ್ಲಿ ರಾಜಭಕ್ತಿಯ ವಚನಗಳ ಮತ್ತು ರಾಣಿಯ ಕ್ಷೇಮಾಭಿವೃದ್ಧಿಗಳ ಹಾರೈಕೆಗಳ ಜೊತೆಯಲ್ಲಿ ಕೆಲವು ದೂರುಗಳೂ ಅಹವಾಲುಗಳೂ ಸೇರಿದ್ದುವು. ದೂರುಗಳನ್ನೂ ಅಹವಾಲುಗಳನ್ನೂ ಸೇರಿಸಿದ್ದಕ್ಕಾಗಿ ಆಂಗ್ಲೋ-ಇಂಡಿಯನ್ ಪತ್ರಿಕೆಗಳು ಆಕ್ಷೇಪಣೆ ಎತ್ತಿದವು. ಅದಕ್ಕೆ ರಾನಡೆಯವರು ಉತ್ತರಿಸುತ್ತಾ—ಸಂತೋಷ ಸಮಾರಂಭದ ಸಮಯಗಳಲ್ಲಿ ಇಂಡಿಯದ ರಾಜಮಹಾರಾಜರುಗಳು ಪ್ರಜೆಗಳ ಬೇಡಿಕೆಗಳನ್ನು ಉಚಿತ ರೀತಿಯಲ್ಲಿ ನಡಸಿಕೊಡುವುದು ಪುರಾತನ ಪದ್ಧತಿಯಾಗಿದೆ. ರಾಣಿಯು

ಇಂಡಿಯಾ ದೇಶದ ಚಕ್ರವರ್ತಿನಿ ಎಂಬ ನೂತನ ಬಿರುದನ್ನು ಧರಿಸುವ ಈ ಮಹಾಸಂದರ್ಭದಲ್ಲಿ ಬ್ರಿಟಿಷ್ ಸರಕಾರ ಈ ಪುರಾತನ ಪದ್ಧತಿಯನ್ನು ಅನುಸರಿಸಿ ಇಂಡಿಯದ ಪ್ರಜೆಗಳಿಗೆ ಜವಾಬ್ದಾರಿಯುತ ಸ್ವಯಮಾಡಳಿತಾಧಿಕಾರವನ್ನು ಅನುಗ್ರಹಿಸುವುದು ಆಗತ್ಯವೆಂದು ವಾದಿಸಿದರು. ಭಾರತೀಯರು ಭಾರತೀಯರ ಮನಸ್ಸನ್ನು ಅರಿಯುವಂತೆ ಯುರೋಪಿಯನ್ನರು ಅರಿಯಲಾರರೆಂದೂ ಮುಸ್ಲಿಂ ಚಕ್ರವರ್ತಿಗಳು ನಿರಂಕುಶಪ್ರಭುಗಳಾಗಿದ್ದರೂ ಸಹ ಒಂದು ಮುಖ್ಯ ತತ್ವವನ್ನು ಅರಿತಿದ್ದರೆಂದೂ, ಅದರಿಂದ ದೇಶೀಯ ರಾಜರನ್ನು ನಂಬಿ ಯುದ್ಧ ಕಾಲದಲ್ಲೂ ಶಾಂತಿ ಕಾಲದಲ್ಲೂ ಅವರಿಗೆ ಜವಾಬ್ದಾರಿಗಳನ್ನು ವಹಿಸುತ್ತಿದ್ದರೆಂದೂ ತಿಳಿಸಿ, ಪ್ರಜಾಪ್ರತಿನಿಧಿಗಳ ಸಭೆಯೊಂದನ್ನೂ ರಾಜರುಗಳ ಸಭೆಯೊಂದನ್ನೂ ಏರ್ಪಡಿಸಬೇಕೆಂದು ಸಲಹೆ ಮಾಡಿದರು. ಈ ಸಭೆಗಳಲ್ಲಿ ರಾಜರ ಮತ್ತು ಪ್ರತಿನಿಧಿಗಳ ದೃಷ್ಟಿ ವಿಶಾಲವಾಗಿ, ಮನಸ್ಸು ಚುರುಕಾಗಿ ಅವರು ತಮ್ಮ ಗುರಿಯ ಐಕ್ಯತೆಯನ್ನು ಮನಗಾಣುವರೆಂದರು. 'ಸಾರ್ವಜನಿಕ ಮಾಮಾ' ಈ ವಿಷಯವನ್ನೆತ್ತಿಕೊಂಡು ಪತ್ರಿಕೆಗಳಿಗೆ ಬಹಿರಂಗಪತ್ರವನ್ನು ಕಳಿಸಿ, ದೆಹಲಿ ದರ್ಬಾರಿನ ಸಮಯದಲ್ಲಿ ಅನೇಕ ರಾಜರುಗಳನ್ನು ಭೇಟಿಮಾಡಿ ಅವರ ಕರ್ತವ್ಯದ ವಿಚಾರದಲ್ಲಿ ಅವರನ್ನು ಎಚ್ಚರಿಸಲು ಪ್ರಯತ್ನಪಟ್ಟರು.

೧೮೭೭ ರಲ್ಲಿ ದಖಿಸ್ಸಿನಲ್ಲಿ ಭಯಂಕರ ಕ್ಷಾಮ ತಲೆದೋರಿತು. ಸಹಸ್ರಾರು ಜನ ರೈತರು ಮೃತ್ಯು ಮುಖದಲ್ಲಿದ್ದರು. ಈ ದುಃಸ್ಥಿತಿಯನ್ನು ಕಂಡು ರಾನಡೆಯ ಮನಸ್ಸು ಕರಗಿತು. ಸಾರ್ವಜನಿಕ ಸಭೆಯ ಮೂಲಕ ಅವರು ಈ ಸಮಯದಲ್ಲಿ ಅಮೂಲ್ಯವಾದ ಸೇವೆಯನ್ನು ಸಲ್ಲಿಸಿದರು. ಸಭೆಯಿಂದ ಕ್ಷಾಮಪೀಡಿತ ಪ್ರದೇಶಗಳಿಗೆ ಪ್ರತಿನಿಧಿಗಳನ್ನು ಕಳಿಸಿದರು. ಈ ಪ್ರತಿನಿಧಿಗಳು ಜನರನ್ನು ಕಂಡು, ಕುಲಕರ್ಣಿ, ಪೋಸ್ಟ್ ಮಾಸ್ಟರ್, ಸ್ಕೂಲ್ ಮಾಸ್ಟರ್ ಮುಂತಾದವರನ್ನು ಪ್ರಶ್ನಿಸಿ, ಕ್ಷಾಮಕ್ಕೆ ಸಂಬಂಧಪಟ್ಟ ವಾಸ್ತವಾಂಶಗಳನ್ನು ಸಂಗ್ರಹಿಸಿ ಸಭೆಯ ಕಾರ್ಯದರ್ಶಿಗೆ ವರದಿಗಳನ್ನು ಕಳಿಸಿದರು. ಪ್ರತಿನಿಧಿಗಳನ್ನು ಚುನಾಯಿಸುವ ಮತ್ತು ಅವರುಗಳನ್ನು ತಕ್ಕ ಸ್ಥಳಗಳಿಗೆ ಕಳಿಸುವ ಕೆಲಸ ರಾನಡೆಯವರದಾಗಿತ್ತು. ರಾನಡೆ ಏಜಂಟರ ವರದಿಗಳನ್ನು ಪರಿಶೀಲಿಸಿ, ಕ್ಷಾಮದ ಸ್ಥಿತಿಗಳನ್ನು ಕುರಿತು ವಿವರವಾದ ಪತ್ರಗಳನ್ನು ಸಿದ್ಧಪಡಿಸುತ್ತಿದ್ದರು. ಕಾರ್ಯದರ್ಶಿಯಿಂದ ಅವು ಸರಕಾರಕ್ಕೆ

ರವಾನೆಯಾಗುತ್ತಿದ್ದವು. ಈ ಪತ್ರಗಳಲ್ಲಿ ಕ್ಷಾಮ ಸಂಬಂಧವಾಗಿ ಸರ್ಕಾರ ನಡಸುತ್ತಿದ್ದ ಚಟುವಟಿಕೆಗಳ ವಿಮರ್ಶೆಯೂ ಇರುತ್ತಿತ್ತು. ಮೆಚ್ಚಿಕೆ ಸಲ್ಲ ಬೇಕಾದ ಕಡೆಗಳಲ್ಲಿ ಉದಾರವಾಗಿರುತ್ತಿತ್ತು ; ಇತರ ಕಡೆಗಳಲ್ಲಿ ವಿಮರ್ಶೆ ನೇರವಾಗಿರುತ್ತಿತ್ತು. ಈ ತನಿಖೆಯಿಂದ ಸರಕಾರಕ್ಕೆ ಸಭೆಯ ವಿಷಯದಲ್ಲಿ ಗೌರವ ಹೆಚ್ಚಿತು. ಆದರೆ ಮುಂದೆ ಜನರ ಸಂಪೊಂದರ ಸಂದರ್ಭದಲ್ಲಿ ಅದನ್ನು ಪ್ರೇರಿಸಿರಬಹುದೆಂಬ ಸಂಶಯದ ಮೇಲೆ ಸರಕಾರ ಸಭೆಯ ವಿಷಯ ದಲ್ಲಿ ಅಸಮಾಧಾನಪಟ್ಟಿತು.

ನೇರವಾದ ಮತ್ತು ಸ್ವತಂತ್ರವಾದ ವಿಮರ್ಶೆಯಿಂದ ಮನಃಪೂರ್ವಕ ವಾದ ಸಹಾಯವನ್ನು ಪಡೆಯುವುದು ಕಷ್ಟಸಾಧ್ಯವಾಗಿತ್ತು. ಆದರೆ ಹದ ವರಿತ ಖಂಡನೆಯನ್ನೂ ವಿಚಾರವರಿತ ಪ್ರಶಂಸೆಯನ್ನೂ ಬೆರಸುವುದರಲ್ಲಿ ರಾನಡೆ ನಿಪುಣರಾಗಿದ್ದರು. ಸಭೆಯ ವರದಿಗಳು ಅತ್ಯುಕ್ತಿಗಳಿಂದ ಕೂಡಿವೆ ಯೆಂದು ಸರಕಾರ ದೋಷಾರೋಪಣೆ ಮಾಡಿದರೆ, ರಾನಡೆ ಉದ್ರೇಕ ಗೊಂಡು ಅದನ್ನು ನಿರಾಕರಿಸುವ ಬದಲು ತಮ್ಮ ತನಿಖೆದಾರರು ಬಹು ದಕ್ಷತೆಯಿಂದ ಸಂಗತಿಗಳನ್ನು ಸಂಗ್ರಹ ಮಾಡಿರುವರೆಂದೂ, ವರದಿಗಳಲ್ಲಿ ತಕ್ಕುದಲ್ಲದ್ದೇನಾದರೂ ಇದ್ದರೆ, ಅದು ಕ್ಷಾಮಪೀಡಿತ ಪ್ರದೇಶಗಳ ಜನಗಳ ಅಭಿಪ್ರಾಯವೆಂದೂ ತಿಳಿಸುವರು. ಈ ಸಮಯದಲ್ಲಿ ರಾನಡೆಯವರ ಮಾರ್ಗದರ್ಶನವಿಲ್ಲದಿದ್ದರೆ ಸಭೆ ಸರ್ಕಾರದ ಖಾಸ್ತಿಗೆ ಒಳಗಾಗುತ್ತಿತ್ತು. ಮುಂದೆ ೧೮೯೭ರ ಕ್ಷಾಮದ ಸಂದರ್ಭದಲ್ಲಿ ಆ ಬಗೆಯ ಪರಿಸ್ಥಿತಿ ಒದಗಿತು. ಗರ್ವಿಷ್ಠನಾದ ಪ್ರತಿನಿಧಿಯೊಬ್ಬನ ನಡತೆಯಿಂದ ಸಭೆ ತೊಂದರೆಗೆ ಒಳಗಾ ಯಿತು. ಆತನ ಕಾರ್ಯ ಆಡಳಿತಕ್ಕೆ ಅನಾವಶ್ಯಕವಾದ ತೊಂದರೆಯನ್ನು ತರತಕ್ಕದ್ದೆಂದೂ ಸಾರ್ವಜನಿಕ ಹಿತಕ್ಕೆ ವಿರೋಧವಾದದ್ದೆಂದೂ ಅಧಿಕಾರಿ ಗಳು ವಿವರಿಸಿ, ಪೂನಾ ಸಾರ್ವಜನಿಕ ಸಭೆ ಈಗಿರುವ ಸ್ಥಿತಿಯಲ್ಲಿ ಸಾರ್ವ ಜನಿಕ ನೀತಿಗಳನ್ನು ಕುರಿತು ಸರಕಾರಕ್ಕೆ ತಿಳಿವಳಿಕೆ ಕೊಡುವ ಅರ್ಹತೆ ಯನ್ನು ಕಳೆದುಕೊಂಡಿದೆಯೆಂದರು.

ಕ್ಷಾಮದ ಬಿರುಸು ಇಳಿದಮೇಲೆ, ಕ್ಷಾಮ ನಿವಾರಣೋಪಾಯಗಳನ್ನು ಕಂಡುಹಿಡಿಯಲು ನೇಮಕವಾದ ಸಮಿತಿಯ ಮುಂದೆ ತಮ್ಮ ಅಭಿಪ್ರಾಯ ಗಳನ್ನು ತಿಳಿಸುವ ಸಲುವಾಗಿ ರಾನಡೆ "ಬೊಂಬಾಯಿ ಪ್ರಾಂತದಲ್ಲಿ ಕ್ಷಾಮದ ಆಡಳಿತ" ಎಂಬ ಪ್ರಬಂಧವನ್ನು ಬರೆದರು. ಅದರಲ್ಲಿ, ಕೆಲವು

ವಿಷಯಗಳಲ್ಲಿ ಸರಿಯಾದ ನೀತಿಗಳನ್ನೂ ಮಾರ್ಗಗಳನ್ನೂ ಅನುಸರಿಸಿದ್ದ ಕ್ಕಾಗಿ ಸರಕಾರವನ್ನು ಮೆಚ್ಚಿಕೆಯಿಂದ ಹೊಗಳಿ, ಜನರು ಆದ್ದರಿಂದ ಸರ ಕಾರದಲ್ಲಿ ನಂಬಿಕೆಯಿಟ್ಟದ್ದು ನ್ಯಾಯವೆಂದೂ, ಕ್ಷಾಮದ ಆಡಳಿತ ಯಶಸ್ವಿ ಯಾಗಲು ಅದು ಸಹಾಯಕವಾಯಿತೆಂದೂ ತಿಳಿಸಿದರು. ಆಮೇಲೆ ಆಡಳಿತದ ಹಲವು ದೋಷಗಳನ್ನು ಸಾರ್ವಜನಿಕಾಭಿಪ್ರಾಯಕ್ಕೆ ಬಿಡುವುದಾಗಿ ವಿವರಿ ಸಿದರು. ಕ್ಷಾಮದ ಬಾಧೆಗೆ ಒಳಗಾಗಿ, ಅದರಿಂದ ಮೃತಿ ಹೊಂದಿದವರೆಂದು ಸರಕಾರ ಕೊಟ್ಟ ಅಲ್ಪ ಸಂಖ್ಯೆಗಳನ್ನು ಅನೇಕ ಅಂಕಿ ಅಂಶಗಳ ಸಹಾಯ ದಿಂದ ಖಂಡಿಸಿದರು.

## ೫. 'ಸಾರ್ವಜನಿಕ ಸಭಾ'ದ ಪತ್ರಿಕೆ

'ಸಾರ್ವಜನಿಕ ಸಭಾ'ದ ತ್ರೈಮಾಸಿಕ ಪತ್ರಿಕೆ ೧೮೭೮ ರಲ್ಲಿ ಆರಂಭವಾಗಿ ೧೯ ವರ್ಷಗಳ ಕಾಲ ನಡೆಯಿತು. ೧೮೯೬ ರವರೆಗೂ ರಾನಡೆ ಅದರ ಸಂಪರ್ಕವನ್ನಿಟ್ಟುಕೊಂಡಿದ್ದರು. ಅನೇಕ ಸಂಚಿಕೆಗಳಲ್ಲಿ ಸುಮಾರು ಮೂರನೆಯ ಎರಡು ಭಾಗದಷ್ಟು ವಿಷಯ ರಾನಡೆಯ ಬರಹವಾಗಿರುತ್ತಿತ್ತು. ಅದರಲ್ಲಿ ಅವರು ರಾಜಕೀಯ ಸಾಮಾಜಿಕ ಧಾರ್ಮಿಕ ವಿಚಾರಗಳನ್ನು ಕುರಿತು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು. ಮೊದಲನೆಯ ಸಂಚಿಕೆಯಲ್ಲಿ ಚಂದಾದಾರರನ್ನು ಕುರಿತು ಬರೆದ ಟಿಪ್ಪಣಿ ಪತ್ರಿಕೆಯ ಉದ್ದೇಶವನ್ನು ಸ್ಪಷ್ಟಪಡಿಸುತ್ತದೆ :

" ಪತ್ರಿಕೆಯಲ್ಲಿ (ಸಭಾದ) ಕಾರ್ಯಕ್ರಮಗಳನ್ನು ಪ್ರಕಟಿಸುವುದಲ್ಲದೆ, ಈವೊತ್ತಿನ ಮುಖ್ಯ ರಾಜಕೀಯ ಪ್ರಶ್ನೆಗಳನ್ನು ಕುರಿತ ಸ್ವತಂತ್ರ ಲೇಖಗಳನ್ನೂ ವಿಮರ್ಶೆಗಳನ್ನೂ ಚರ್ಚೆಗಳನ್ನೂ ಸೇರಿಸುವ ಅವಕಾಶವನ್ನು ಉಂಟು ಮಾಡಿಕೊಳ್ಳುತ್ತೇವೆ. ಅನೇಕ ವಿಷಯಗಳ ವಿಚಾರದಲ್ಲಿ ಸಭಾ ಯಾವೊಂದು ಕ್ರಮವನ್ನು ಅನುಸರಿಸುವುದಕ್ಕೂ ಮೊದಲು ಸಾರ್ವಜನಿಕ ಅಭಿಪ್ರಾಯವನ್ನು ರೂಢಿಸಿ ರೂಪಿಸಬೇಕಾಗುತ್ತದೆ. ಅಂಥ ವಿಷಯಗಳು ಪ್ರಸ್ತುತ ತ್ರೈಮಾಸಿಕದ ಸ್ವತಂತ್ರ ಲೇಖ ವಿಭಾಗದಲ್ಲಿ ತಕ್ಕ ಆಶ್ರಯವನ್ನು ಪಡೆಯುತ್ತವೆ.

" ಪತ್ರಿಕೆ ರಾಯಲ್ ಅಷ್ಟಪತ್ರಾಕಾರದಲ್ಲಿ ೪೮ ಪುಟಗಳಿದ್ದು ಅದರ ವಾರ್ಷಿಕ ಚಂದಾ ನಾಲ್ಕು ರೂಪಾಯಿಗಳಾಗಿರುತ್ತದೆ. ಜುಲೈ, ಅಕ್ಟೋಬರ್, ಜನವರಿ, ಏಪ್ರಿಲ್ ತಿಂಗಳುಗಳಲ್ಲಿ ಅದು ಪ್ರಕಟವಾಗುತ್ತದೆ."

ಸಾರ್ವಜನಿಕ ಸಭಾದ ಪತ್ರಿಕೆಯಲ್ಲಿ ಬರೆದ ಹಲವು ಲೇಖನಗಳಿಂದ ನಾವು ರಾನಡೆಯವರ ಅಭಿಪ್ರಾಯಗಳನ್ನು ತಿಳಿಯಬಹುದಾಗಿದೆ.

ರಾನಡೆಯವರ ಅನೇಕ ಲೇಖನಗಳು ಇಂಡಿಯದ ಭೂಸ್ವತ್ತಿನ ಪ್ರಶ್ನೆಗೆ ಸಂಬಂಧಪಟ್ಟವು. ಭಾರತದ ಜನಸಂಖ್ಯೆಯಲ್ಲಿ ಶೇಕಡ ೭೫ ಭಾಗ ರೈತಾಪಿ ಜನರು. ಅವರಲ್ಲಿ ಬಹು ಮಂದಿ ಸಣ್ಣ ಹಿಡುವಳಿದಾರರು. ಅವರದು ತೀರ ಬಡತನದ ಜೀವನ. ಸಾಲಗಳ ಹೊರೆಯಲ್ಲಿ ಅರೆಜೀವವಾಗಿರು

ತ್ತಾರೆ. ಮಳೆ ಬಾರದೆ ಹೋದರೆ ಅಥವಾ ಕ್ಷಾಮ ಬಂದರೆ ಸುಲಭವಾಗಿ ನಾಶವಾಗುತ್ತಾರೆ. ಆದ್ದರಿಂದ ರಾನಡೆಯಂಥ ದೇಶಾಭಿಮಾನಿಯೂ ದಯಾಳುವೂ ಭೂಸ್ವತ್ತಿನ ವಿವಿಧ ಸಮಸ್ಯೆಗಳಲ್ಲಿ ಆಸಕ್ತಿ ವಹಿಸಿದ್ದು ಆಶ್ಚರ್ಯ ವಲ್ಲ. ಅವರ ಕೆಲವು ಲೇಖನಗಳ ಹೆಸರುಗಳು ಹೀಗಿವೆ—

ಭೂಸ್ವತ್ತಿನ ಸಮಸ್ಯೆ, ಅದಕ್ಕೆ ಪರಿಹಾರ (೧೮೭೯) ;
ದಖನ್ನಿನ ರೈತರ ಪರಿಹಾರದ ಕಾನೂನು (೧೮೭೯) ;
ಬ್ರಿಟಿಷ್ ಇಂಡಿಯಾದಲ್ಲಿ ಭೂಸ್ವತ್ತಿನ ಮಾರಾಟದ ಕಾನೂನು (೧೮೮೦) ;
ದಖನ್ನಿನಲ್ಲಿ ಶಾಶ್ವತ ಭೂವ್ಯವಸ್ಥೆಯನ್ನು ಕುರಿತು ವೆಡ್ಡರ್ ಬರ್ನ್ ಮತ್ತು ಆತನ ವಿಮರ್ಶಕರು (೧೮೮೧) ;
ಮಧ್ಯಪ್ರಾಂತದ ಭೂಕಂದಾಯ ಮತ್ತು ಗೇಣಿ ಶಾಸನಗಳು (೧೮೮೧);
ಭೂ ಶಾಸನ ಸುಧಾರಣೆಗಳು ಮತ್ತು ವ್ಯವಸಾಯದ ಬ್ಯಾಂಕುಗಳು (೧೮೮೧) ;
ರಷ್ಯಾದ ಜೀತಗಾರರ ಬಿಡುಗಡೆ (೧೮೮೩) ;
ಬೊಂಬಾಯಿ ಪ್ರಾಂತದಲ್ಲಿ ಅರಣ್ಯ ರಕ್ಷಣೆ (೧೮೮೩) ;
ಪ್ರಷ್ಯಾದ ಭೂ ಶಾಸನ ಮತ್ತು ಬಂಗಾಳದ ಗೇಣಿ ಶಾಸನ (೧೮೮೩);
ಭೂಕಂದಾಯದ ಪುನರ್ವ್ಯವಸ್ಥೆಯಲ್ಲಿ ಸೂಚಿಸಿರುವ ಬದಲಾವಣೆಗಳು (೧೮೮೪) ;
ಭೂಕಂದಾಯದ ನೀತಿಯಲ್ಲಿ ನೂತನ ಮಾರ್ಗವನ್ನು ಕುರಿತು ಪ್ರತಿಭಟನೆ ಮತ್ತು ಎಚ್ಚರಿಕೆ (೧೮೮೪) ;
ಮರಾಮತ್ತು ಕೆಲಸಗಳ ನೀತಿಯ ಆರ್ಥಿಕ ಪರಿಣಾಮಗಳು (೧೮೮೪) ;
ಡಚ್ ಇಂಡಿಯಾ ಮತ್ತು ಕೃಷಿ ಪದ್ಧತಿ (೧೮೯೦) ;
ಇಂಡಿಯಾದಲ್ಲಿ ರೈತರ ಸಾಲದ ಪುನರ್ವ್ಯವಸ್ಥೆ (೧೮೯೧).

ಈ ಲೇಖನಗಳನ್ನು ಸಮೀಕ್ಷಿಸಿದರೆ ಇಂಡಿಯದ ಭೂಸಮಸ್ಯೆಯ ವಿಷಯವಾಗಿ ರಾನಡೆ ಹಲವು ನಿಶ್ಚಿತಾಭಿಪ್ರಾಯಗಳನ್ನು ಹೊಂದಿದ್ದರೆಂದು ವ್ಯಕ್ತವಾಗುತ್ತದೆ. ಅವುಗಳನ್ನು ಸಂಗ್ರಹವಾಗಿ ಪರಿಶೀಲಿಸೋಣ.

(೧) ಇಂಡಿಯದ ರೈತರ ಬಡತನ.—ರಾನಡೆಯವರ ಅನೇಕ

ಲೇಖನಗಳಿಂದ ಈ ಅಭಿಪ್ರಾಯ ತಿಳಿದು ಬರುತ್ತದೆ: ನಮ್ಮ ದೇಶದ ರೈತರು ಬಲಕಾಯರೂ ತೃಪ್ತರೂ ಪ್ರವೃದ್ಧಮಾನರೂ ಆಗಲು ಸಾಧ್ಯವಿದೆ; ಆದರೆ ಯಾವುದೋ ಕಾರಣಗಳಿಂದ ಅವರು ಹೀನ ಸ್ಥಿತಿಯಲ್ಲಿ ತೊಳಲುತ್ತಿದ್ದಾರೆ. "ಭೂಶಾಸನ ಸುಧಾರಣೆಗಳು ಮತ್ತು ವ್ಯವಸಾಯದ ಬ್ಯಾಂಕುಗಳು" ಎಂಬ ಲೇಖನದಲ್ಲಿ ಈ ಚಿತ್ರವನ್ನು ಕೊಟ್ಟಿದಾರೆ:—

"ಭೂಮಿ (ದಖನ್ನಿನದು) ನಿಸ್ಸಾರವಾಗಿದೆ; ಮಳೆ ಕಡಮೆ ಮತ್ತು ಕಾಲಕ್ಕೆ ಸರಿಯಾಗಿ ಬರುವುದಿಲ್ಲ; ಜನವಸತಿ ವಿರಳವಾಗಿದೆ. (೧೮೭೨ರ ಜನಗಣತಿಯನ್ನು ಗಮನದಲ್ಲಿರಿಸಿಕೊಂಡು ಹೇಳಿರುವುದು); ಇವರಲ್ಲಿ ಬಹುಮಂದಿ ರೈತಾಪಿಜನರು ಮತ್ತು ಅವಿದ್ಯಾವಂತರು; ಇವರ ದುಡಿಮೆಗೆ ನಿಸ್ಸಾರವಾದ ಭೂಮಿಯಲ್ಲದೆ ಬೇರೆ ಮಾರ್ಗವಿಲ್ಲ; ಸಂಸಾರವೊಂದಕ್ಕೆ ಹತ್ತು ಎಕರೆಗಳಿಗಿಂತಲೂ ಕಡಮೆಯಾದ ಹಿಡುವಳಿ; ನಿವ್ವಳ ಉತ್ಪತ್ತಿಯ ಮೂರನೆಯ ಒಂದು ಭಾಗಕ್ಕಿಂತ ಹೆಚ್ಚಾದ ಕಂದಾಯದ ಹೊರೆ ಇದೆ; ೬೦ ರೂಪಾಯಿಗಳಿಗೆ ಹೆಚ್ಚಿಲ್ಲದ ವರಮಾನದ ಬಡತನದ ಸಂಸಾರ; ಬಹುಮಂದಿ ಸಣ್ಣ ಪುಟ್ಟ ಸಾಲಿಗರಿಗೆ ಕೊಡಬೇಕಾದ ತೀರಿಸಲಾರದ ಸಾಲದ ಹೊರೆಗಳು; ಬೇಸಾಯದ ಜವಾಬ್ದಾರಿಯನ್ನು ಹೊರಲಿಷ್ಟವಿಲ್ಲದ ಹೊರನಾಡಿನ ಸಾಲಿಗರೇ ಇವರಲ್ಲಿ ಹೆಚ್ಚು;—ರೈತರ ಪರಿಹಾರೋಪಾಯ ಮಾರ್ಗವನ್ನು ಚರ್ಚಿಸುವಾಗ ಬಹು ಮುಖ್ಯವಾದ ಈ ಸಾಮಾಜಿಕ ಆರ್ಥಿಕ ಸ್ಥಿತಿಗಳನ್ನು ಗಮನಿಸುವುದು ಅತ್ಯಗತ್ಯ."

(೨) ರೈತರ ದುಃಸ್ಥಿತಿಗೆ ಕಾರಣಗಳು.—ಭಾರತದ ರೈತನು ಮುಂದಾಲೋಚನೆಯಿಲ್ಲದವನು, ಅವನು ಅವಿದ್ಯಾವಂತ, ಅವನಲ್ಲಿ ಚಟುವಟಿಕೆಯಿಲ್ಲ; ಉದ್ದಕ್ಕೂ ಅವನು ಹೀನ ಸ್ಥಿತಿಯಲ್ಲಿದಾನೆ, ಅವನ್ನು ಸರಿಪಡಿಸುವುದು ಸಾಧ್ಯವೇ ಇಲ್ಲ;—ಸುಲಭವಾದ ಈ ವಾದವನ್ನು ರಾನಡೆ ಒಪ್ಪುವುದಿಲ್ಲ. ಅವಿದ್ಯೆ, ಸೋಮಾರಿತನ, ಮಿತವ್ಯಯವಿಲ್ಲದಿರುವಿಕೆ ಇವೆಲ್ಲ ಕಾರಣಗಳಲ್ಲ, ಪರಿಣಾಮಗಳೆಂದು ರಾನಡೆ ಸೂಚಿಸಿದರು. ರೈತರ ದುಃಸ್ಥಿತಿಗೆ ರಾನಡೆ ಮುಖ್ಯವಾಗಿ ಮೂರು ಕಾರಣಗಳನ್ನು ತಿಳಿಸುತ್ತಾರೆ:

(i) ಈಗಿರುವ ರೈತರ ಸಾಲದ ಪದ್ಧತಿ.—ಹಳ್ಳಿಗಳಲ್ಲಿ ಸಣ್ಣ ಪುಟ್ಟ ಲೇವಾದೇವಿಗಾರರು ಬಹುಮಂದಿ ರೈತರನ್ನು ಸುಲಿಗೆ ಮಾಡಲು ಕಾನೂನು ಅವರಿಗೆ ಅನುಕೂಲವಾಗಿದೆ. ಸಾಲಗಾರರಲ್ಲಿ ಬಹುಮಂದಿ ಪಿತ್ರಾರ್ಜಿತ ಸಾಲದಿಂದ ನರಳುತ್ತಾರೆ. ಅವರು ಕೊಡುವ ಬಡ್ಡಿ ದರ ಹೆಚ್ಚು. ಅದು ಶೇಕಡ ೨೫ ರಿಂದ ೭೫ ರವರೆಗೆ ಹೋಗುತ್ತದೆ. ಗ್ರಾಮದ ಆರ್ಥಿಕ ವ್ಯವಸ್ಥೆ

ಯಲ್ಲಿ ಸಾಲಿಗರು ಅಗತ್ಯವಾಗಿ ಬಿಟ್ಟಿದಾರೆ. ಸರ್ಕಾರದ ಭೂಕಂದಾಯದ ನೀತಿ ಕಠಿನವಾಗಿದೆ: ಒಂದು ಗೊತ್ತಾದ ವೇಳೆಯಲ್ಲಿ ಹಿಡುವಳಿದಾರನು ಸರ್ಕಾರಕ್ಕೆ ಕಂದಾಯವನ್ನು ನಗದಾಗಿ ಕಟ್ಟಬೇಕು; ಆ ವೇಳೆ ಸಾಮಾನ್ಯವಾಗಿ ಫಸಲಿನ ಕಾಲವಲ್ಲ; ಆದ್ದರಿಂದ ರೈತ ಕಂದಾಯ ಕಟ್ಟಲು ಸಾಲ ತೆಗೆಯಬೇಕು. ಬರದ ಕಾಲದಲ್ಲಿ ಈ ಸ್ಥಿತಿ ಇನ್ನೂ ಕಠಿನವಾಗುತ್ತದೆ. ನಿಜವಾಗಿ ಆಗುವುದೇನೆಂದರೆ ಬಹು ಮಟ್ಟಿಗೆ ಸಾಲಿಗರು ಪದೇ ಪದೇ ಸಾಲದಲ್ಲಿ ಸಿಕ್ಕುವ ರೈತನ ಪರವಾಗಿ ಕಂದಾಯ ಕಟ್ಟುತ್ತಾರೆ. ಹೀಗೆ ಈಗಿರುವ ಕಂದಾಯಪದ್ಧತಿ ಆರ್ಥಿಕವಾಗಿ ಸುಸ್ಥುವಾಗಿಲ್ಲ, ವಿನಾಶಕಾರಿಯಾಗಿದೆ.

(ii) ರೈತರ ದುಃಸ್ಥಿತಿಗೆ ಎರಡನೆಯ ಕಾರಣ, ಅವರಲ್ಲಿ ಬಂಡವಾಳ ಇಲ್ಲದಿರುವುದು. ಇದರಿಂದ ರೈತನ ಸ್ಥಿತಿ ದರಿದ್ರವಾಗಿಯೇ ಉಳಿದು ಅಪಾಯಕರವಾಗುತ್ತದೆ.

(iii) ರಾನಡೆಯವರ ದೃಷ್ಟಿಯಲ್ಲಿ ರೈತರ ಹೀನಸ್ಥಿತಿಗೆ ಮೂರನೆಯ ಮತ್ತು ಬಹು ಮುಖ್ಯವಾದ ಕಾರಣ (ಮೊದಲ ಎರಡು ಕಾರಣಗಳೂ ಮೂರನೆಯದರಿಂದ ಹುಟ್ಟಿದುವು)–ಸರ್ಕಾರದ ಭೂಸ್ವಾಮ್ಯ ನೀತಿ. ಭೂಮಿಯ ವಿಷಯದಲ್ಲಿ ಸರ್ಕಾರಕ್ಕಿರುವ ಏಕಸ್ವಾಮ್ಯತೆ ಮತ್ತು ಇಷ್ಟ ಬಂದಂತೆ ಭೂಕಂದಾಯವನ್ನು ಹೆಚ್ಚಿಸುವ ಹಕ್ಕು, ಇವೆರಡು ದೇಶದ ಆರ್ಥಿಕಾಭಿವೃದ್ಧಿಗೆ ಇರುವ ಬಹುದೊಡ್ಡ ಅಡಚಣೆಗಳೆಂದು ರಾನಡೆ ತಿಳಿಸಿದರು: ಸರ್ಕಾರ ಭೂಸ್ವತ್ತಿನ ಸಂಪೂರ್ಣಾಧಿಕಾರಿಯಾಗಿರುವುದರಿಂದ ಕಂದಾಯ ಹೆಚ್ಚುತ್ತಲೇ ಹೋಗುತ್ತದೆ; ಅದರ ಹೊರೆ ಹೊರಲಾರದ್ದಾಗಿ ರೈತನ ಸಾಹಸವನ್ನೂ ಪ್ರಯತ್ನ ಶಕ್ತಿಯನ್ನೂ ಕೊಲ್ಲುತ್ತದೆ. ರೈತನ ಸ್ಥಿತಿ ಅನಿಶ್ಚಿತವಾದದ್ದರಿಂದ ಬೇಸಾಯಕ್ಕೆ ಬೇಕಾದ ಬಂಡವಾಳ ಸುಲಭವಾಗಿ ದೊರೆಯುವುದಿಲ್ಲ.

(೩) ರೈತರ ರೋಗದ ಕಾರಣವನ್ನು ಕಂಡು ಹಿಡಿದು ರಾನಡೆ ಅದರ ಪರಿಹಾರೋಪಾಯಗಳನ್ನು ಹೇಳುತ್ತಾರೆ. ಅವು ಯಾವುವೆಂದರೆ— ರೈತನ ಸಾಲದ ದುಷ್ಪರಿಣಾಮಗಳನ್ನು ತಪ್ಪಿಸಲು ಅನುಕೂಲವಾದ ಶಾಸನಗಳು; ಬೇಸಾಯಕ್ಕೆ ಬೇಕಾದ ಬಂಡವಾಳ ಸುಲಭವಾಗಿ ದೊರೆಯುವಂತೆ ಅಗತ್ಯವಾದ ಸಾಲದ ಮತ್ತು ಬ್ಯಾಂಕ್ ಅನುಕೂಲತೆಗಳು; ಭೂ ವ್ಯವ

ಸ್ಥೆಯ ಅನಿಶ್ಚಿತತೆಯನ್ನೂ ಹೊರೆಯನ್ನೂ ಹೋಗಲಾಡಿಸುವಂತೆ ಗೇಣಿ ಪದ್ಧತಿಯಲ್ಲಿ ಸುಧಾರಣೆಗಳು.

೧೮೭೯ ರ ದಖನ್ನಿನ ರೈತ ಪರಿಹಾರ ಶಾಸನದಲ್ಲಿ ರಾನಡೆಯ ಅನೇಕ ಅಭಿಪ್ರಾಯಗಳು (ಶಾಸನಪೂರ್ವಕ ಸುಧಾರಣೆಗೆ ಸಂಬಂಧ ಪಟ್ಟವು) ಅಳವಡಿಸಲ್ಪಟ್ಟವು. ರೈತನನ್ನು ಕಾನೂನಿನ ಕೆಲವು ಕಷ್ಟಗಳಿಂದ ಬಿಡುಗಡೆ ಮಾಡುವುದು ಈ ಶಾಸನದ ಗುರಿಯಾಗಿತ್ತು. ಅದನ್ನು ಕೆಳಗೆ ಕಂಡ ರೀತಿಗಳಲ್ಲಿ ಸಾಧಿಸಲಾಯಿತು. ಮೇಲೆಯೇ ಅನ್ಯಾಯವೆಂದು ತೋರುವ ಸಂದರ್ಭಗಳಲ್ಲಿ ಕರಾರಿನ ಹಿಂದೆ ಹೋಗಿ—ಎಂದರೆ ಮೂಲವನ್ನು ತಿಳಿದು–ಪರಿಶೀಲಿಸಲು ಕೋರ್ಟುಗಳಿಗೆ ಅಧಿಕಾರ ದೊರೆಯಿತು ; ಹೊಸ ಶಾಸನದ ಪ್ರಕಾರ ರೈತನು ಪಾರ್ಟಿಯಾಗಿರುವ ಪ್ರತಿಯೊಂದು ಕರಾರೂ ಗ್ರಾಮದ ರಿಜಿಸ್ಟ್ರಾರರ ಅವಗಾಹನೆಗೆ ಒಳಗಾಗಿ ಆಗಬೇಕಾಯಿತು ; ದಾವಾದ ಲಿಮಿಟೇಷನ್ ಅವಧಿಯನ್ನು ಹೆಚ್ಚಿಸಲಾಯಿತು ; ಅಲ್ಪಮೊಬಲಗಿನ ದಾವಾಗಳನ್ನು ಇತ್ಯರ್ಥಪಡಿಸಲು ವಿಲೇಜ್ ಮುನ್ಸೀಫರಿಗೆ ಅಧಿಕಾರ ಕೊಡಲಾಯಿತು ; ಚಕ್ರಬಡ್ಡಿಯನ್ನು ರದ್ದುಮಾಡಲಾಯಿತು ; ದಸ್ತಗಿರಿ ಮತ್ತು ಜೈಲುವಾಸಗಳನ್ನು ತೆಗೆದು ಹಾಕಲಾಯಿತು ; ಆಧಾರ ಮಾಡದ ನಗದು ಸಾಲಗಳಿಗೆ ಭೂಮಿಯನ್ನು ಹರಾಜು ಮಾಡಲು ಅವಕಾಶ ತಪ್ಪಿಸಲಾಯಿತು ; ಪಿತ್ರಾರ್ಜಿತ ಸಾಲಗಳ ಹೊಣೆಯನ್ನು ಸಡಿಲಗೊಳಿಸಲಾಯಿತು.

ರಾನಡೆ ಶಾಸನವನ್ನು ಹೃತ್ಪೂರ್ವಕವಾಗಿ ಸ್ವಾಗತಿಸಿದರು. ಆದರೆ ಪಿತ್ರಾರ್ಜಿತ ಸಾಲಗಳ ಹೊಣೆಯನ್ನು ತಪ್ಪಿಸಿದ್ದು ವಿವೇಕವಿರಬಹುದೆ ಎಂದು ಸಂದೇಹಪಟ್ಟರು. ಇನ್ನೊಂದು ದೋಷ ಅವರಿಗೆ ತೋರಿತು : ಶಾಸನದ ಪರಿಣಾಮವಾಗಿ ರೈತರಿಗೆ ಹಣಗಾರರಿಂದ ಸಾಲ ದೊರೆಯುವುದು ಕಷ್ಟವಾಗುತ್ತದೆ. ಆದರೆ ಭೂಕಂದಾಯ ಪದ್ಧತಿ ಕಠಿನವಾಗಿರುವವರೆಗೂ ರೈತನು ಕಂದಾಯಕ್ಕಾಗಿ ಹೇಗಾದರೂ ಸಾಲ ಸಂಪಾದಿಸಬೇಕಾಗುತ್ತದೆ. ಹನ್ನೆರಡು ವರ್ಷಗಳ ಕಾಲ (೧೮೮೧–೧೮೯೩) ರಾನಡೆ ಸ್ಪೆಷಲ್ ಜಡ್ಜಾಗಿ ಈ ಶಾಸನಕ್ಕೆ ಸಂಬಂಧಪಟ್ಟ ವಿವಾದಗಳನ್ನು ಪರಿಶೀಲಿಸಿದರು. ಶಾಸನವು ಆಶಿಸುವ ಪರಿಹಾರ ನಿಜವಾಗಿ ದೊರೆಯಬೇಕಾದರೆ ಸರಕಾರದ ಭೂಕಂದಾಯ ನೀತಿ ಉದಾರವಾಗಬೇಕೆಂದು ರಾನಡೆ ಸದಾ ಒತ್ತಿ ಹೇಳುತ್ತಿದ್ದರು.

೧೮೮೧ ರ ವೇಳೆಗೇ ರಾನಡೆ ರೈತರಿಗೆ ಬ್ಯಾಂಕ್ ಮತ್ತು ಸಾಲದ ಅನುಕೂಲತೆಗಳನ್ನು ಒದಗಿಸುವ ಪ್ರಶ್ನೆಯನ್ನು ಪರಿಶೀಲಿಸುತ್ತಿದ್ದರು. ವ್ಯವಸಾಯಕ್ಕೆ ಬೇಕಾದ ಬಂಡವಾಳವನ್ನು ಒದಗಿಸುವುದು ತೀರ ಜರೂರಾದ ವಿಷಯವೆಂದೂ ಬಂಡವಾಳವಿಲ್ಲದೆ ಬೇಸಾಯ ಹಿಂದೆ ಬೀಳುತ್ತಿದೆಯೆಂದೂ ಕೆಡುತ್ತಿದೆಯೆಂದೂ ಅವರು ಕಂಡುಕೊಂಡಿದ್ದರು. ಆಚರಣೆಯಲ್ಲಿದ್ದ ಸಾಲಪದ್ಧತಿ ಕೇವಲ ದುಷ್ಪರಿಣಾಮಕಾರಿಯೆಂದೂ ಅವರಿಗೆ ತಿಳಿದಿತ್ತು. "ರೈತರ ಸಾಲದ ಪುನರ್ವ್ಯವಸ್ಥೆ" (೧೮೯೧) ಎಂಬ ಲೇಖನದಲ್ಲಿ, ಇದೇ ಬಗೆಯ ಪರಿಸ್ಥಿತಿಯಲ್ಲಿ ಹಂಗೇರಿ, ಫ್ರಾನ್ಸ್, ಇಟಲಿ, ಬೆಲ್ಜಿಯಂ, ಸ್ವಿಟ್ಜರ್ಲೆಂಡ್ ಮೊದಲಾದ ಯುರೋಪಿಯನ್ ದೇಶಗಳಲ್ಲಿ ಏನುಮಾಡಿದ್ದರೆಂಬುದನ್ನು ಪರಿಶೀಲಿಸಿದರು. ರೈತಾಪಿ ವರ್ಗದವರ ವಿಶೇಷ ಅಗತ್ಯಗಳಿಗೆ ಅನುಕೂಲವಾದ ಸಾಲ ಪದ್ಧತಿಯನ್ನು ಆ ದೇಶಗಳಲ್ಲಿ ಆಚರಣೆಗೆ ತಂದಿದ್ದರು. ಅದರಿಂದ ಅದ್ಭುತವಾದ ಸತ್ಪರಿಣಾಮಗಳು ಉಂಟಾಗಿದ್ದವು. ಇಂಡಿಯದಲ್ಲೂ ಅದೇ ಬಗೆಯ ಜಯವನ್ನು ನಿರೀಕ್ಷಿಸಬಹುದಾಗಿ ರಾನಡೆ ವಾದಿಸಿದರು. ರಾನಡೆ ಪ್ರಗತಿಯ ಪಥದಲ್ಲಿದ್ದರು. ಯೂರೋಪಿನ ಸಹಕಾರ ಬ್ಯಾಂಕಿಂಗ್ ಪದ್ಧತಿಯನ್ನು ಪರಿಶೀಲಿಸಿ ಇಂಡಿಯಾದಲ್ಲಿ ಅದರ ಆಚರಣೆಯ ಸಾಧ್ಯತೆಯನ್ನು ವಿವೇಚಿಸುವುದಕ್ಕಾಗಿ ಮದರಾಸು ಸರ್ಕಾರ ೧೮೯೨ ರಲ್ಲಿ ಒಂದು ಸಮಿತಿಯನ್ನು ನೇಮಕಮಾಡಲು ಯೋಚಿಸಿತು. ೧೮೯೫ ರಲ್ಲಿ ಆ ಸಮಿತಿಯ ಅಧ್ಯಕ್ಷ ಸರ್ ಫ್ರೆಡೆರಿಕ್ ನಿಕಲ್ಸನ್ ರ ವರದಿ ಪ್ರಕಟವಾಯಿತು. ೧೯೦೪ ರ ಇಂಡಿಯದ ಸಹಕಾರ ಸಾಲದ ಕಾನೂನು ಜಾರಿಗೆ ಬರುವ ವೇಳೆಗೆ ರಾನಡೆ ತೀರಿ ಹೋಗಿದ್ದರು.

ಭೂಕಂದಾಯ ನೀತಿಯಲ್ಲಿ ಸುಧಾರಣೆಯಾದ ಹೊರತು ರೈತರ ಸಮಸ್ಯೆ ಪರಿಹಾರವಾಗುವುದಿಲ್ಲವೆಂದು ರಾನಡೆ ಬೇಸರವಿಲ್ಲದೆ ಹೇಳುತ್ತಿದ್ದರು. ಭೂಮಾಲಿಕರಿಗೆ ಭೂಮಿಯ ಮೇಲೆ ಸ್ವತಂತ್ರವಾದ ಮತ್ತು ಸಂಪೂರ್ಣವಾದ ಒಡೆತನವನ್ನು ಕೊಡುವುದು ಅಗತ್ಯವಾದ ಸುಧಾರಣೆ. "ಮನೆ ಅಥವಾ ಬಟ್ಟೆಗಳು ಹೇಗೆ ಸ್ವಂತ ಆಸ್ತಿಯೋ ಹಾಗೆಯೇ ಪ್ರತಿಯೊಬ್ಬನ ಭೂಮಿಯೂ ಆತನ ಸರ್ವ ಸ್ವಾಮ್ಯದ್ದಾಗಿರಲಿ" ಎಂದು ರಾನಡೆ ಹೇಳುತ್ತಾರೆ. ದೇಶದ ವರಮಾನದ ಮುಖ್ಯ ಮೂಲ ವ್ಯವಸಾಯ; ಆ ವ್ಯವಸಾಯ ಬಡತನದಿಂದ ನರಳುತ್ತಿರುವ, ಕಂದಾಯದ ಹೊರೆಯಿಂದ

ಕುಗ್ಗಿರುವ, ಭೂಮಾಲಿಕತನದ ಸುಖಸಂತೋಷಗಳಿಲ್ಲದ ರೈತರ ಕೈಯಲ್ಲಿದೆ; ಹೀಗಿರುವಾಗ ದೇಶದ ಸಂಪತ್ತು ಹೆಚ್ಚುವುದೆಂತು ?

ಭೂಸ್ವತ್ತಿನ ಶಾಶ್ವತ ವ್ಯವಸ್ಥೆಯಿಂದ ಎರಡು ದೊಡ್ಡ ಪ್ರಯೋಜನಗಳಾಗುತ್ತವೆಯೆಂದು ರಾನಡೆ ಹೇಳುತ್ತಾರೆ. ಒಂದು, ಭೂಮಿಯ ಮೇಲೆ ಬಂಡವಾಳ ಹಾಕಲು ಖಾಸಗಿ ಬಂಡವಾಳಗಾರರಿಗೆ ಆಸಕ್ತಿ ಹುಟ್ಟುತ್ತದೆ :

"ಸೈನ್ಸಿನಿಂದಲೂ ಅನುಭವದಿಂದಲೂ ತೋರುವ ಎಲ್ಲ ಅಭಿವೃದ್ಧಿಗಳನ್ನು ಎಸಗಬೇಕಾದರೆ ಭೂಮಿಯ ಮೇಲೆ ಭಾರಿ ಬಂಡವಾಳವನ್ನು ಹಾಕಬೇಕು. ಭೂಮಾಲಿಕತನದ ಆಕರ್ಷಣೆಯಿಂದ ಮಾತ್ರವೇ ಜನ ಆ ರೀತಿ ಖರ್ಚುಮಾಡಿಯಾರು. ಹಣವನ್ನು ಸಾಲವಾಗಿ ಕೊಡುವ ರೈತರಿಗೆ ಭೂಮಿಯ ಮೇಲೆ ಸರ್ವಸ್ವಾಮ್ಯವಿದ್ದ ಹೊರತು ಸಾಹುಕಾರರಾಗಲಿ ಭೂ ಅಡಮಾನದ ಜಾಯಿಂಟ್‌ಸ್ಟಾಕ್ ಬ್ಯಾಂಕುಗಳಾಗಲಿ ಬಾವಿ ತೋಡುವುದಕ್ಕೆ, ಗೊಬ್ಬರ ಹಾಕುವುದಕ್ಕೆ, ಅಣೆಕಟ್ಟು ಕಟ್ಟುವುದಕ್ಕೆ ಬೇಕಾದ ಬಂಡವಾಳವನ್ನು ಕೊಡಲು ಧೈರ್ಯಮಾಡುವುದಿಲ್ಲ. ಇತರ ದೇಶಗಳಲ್ಲಿ ರೈತರು ಸರಕಾರದ ಒಕ್ಕಲುಗಳಾಗದೆ ತಾವು ಉಳುವ ಭೂಮಿಯ ಸರ್ವಸ್ವಾಮ್ಯ ಹೊಂದಿರುವುದೇ ಅಲ್ಲಿನ ಭೂಬ್ಯಾಂಕ್‌ಗಳು ಜಯಪ್ರದವಾಗಲು ಮುಖ್ಯಕಾರಣ"[1]

ಇನ್ನೊಂದು ಪ್ರಯೋಜನವೇನೆಂದರೆ, ಭೂಮಿ ಅದನ್ನು ಸರಿಯಾಗಿ ಉಪಯೋಗಮಾಡುವವರ ವಶಕ್ಕೆ ಬರುತ್ತದೆ :

"ಹಾಳತವಾಗಿ ನಡೆಯುವ ರೈತ ತನ್ನ ಸ್ಥಿತಿಯನ್ನು ಕಾಪಾಡಿಕೊಳ್ಳುವುದಲ್ಲದೆ ಬೇಸಾಯವನ್ನು ಮುಂದುವರಿಸಿ ತನ್ನ ಸ್ಥಿತಿಯನ್ನು ಉತ್ತಮಪಡಿಸಿಕೊಳ್ಳುತ್ತಾನೆ. ಉದಾಸೀನನಾದ ಸೋಮಾರಿಯಾದ ರೈತ ಉತ್ತಮನಾದವನಿಗೆ ದಾರಿಮಾಡಿಕೊಡುತ್ತಾನೆ. ಆತನಾದರೋ ದೇಶದ ಒಟ್ಟಿನ ಹಿತಕ್ಕಾಗುತ್ತಾನೆ. ಈ ಬದಲಾವಣೆ ತತ್‌ಕ್ಷಣ ಆಗದೆ ಸಾವಕಾಶವಾದ ಸಹಜವಾದ ಬೆಳವಣಿಗೆಯಾಗುತ್ತದೆ: ಈ ನೂತನ ಸ್ಥಿತಿ ನೆಲೆಯಾಗಿರುವ ಹಿತಾಸಕ್ತಿಗಳನ್ನು ಕ್ಷೋಭೆಗೀಡುಮಾಡದೆ ಎಲ್ಲ ಜನವರ್ಗಗಳ ಹಿತವನ್ನೂ ಪೋಷಿಸುತ್ತದೆ."[2]

ಸರಕಾರ ತನ್ನ ಭೂನೀತಿಯಿಂದ ಬಡತನದಲ್ಲಿ ನರಳುತ್ತಿರುವ ರೈತನನ್ನು ಭೂಮಿಗೆ ಅಂಟಿಕೊಂಡಿರುವಂತೆ ಮಾಡಿದೆಯೆಂದೂ, ಭೂಮಿ ಬಂಡವಾಳಗಳ ಸಹಜ ಮಿಲನವನ್ನು ಅಡ್ಡಿಪಡಿಸುತ್ತಿದೆಯೆಂದೂ ರಾನಡೆ ತಿಳಿಸಿದರು. ಸಾಲ ಕೊಡುವವನು ಅನೇಕ ವೇಳೆ ಭೂಮಿಯ ಒಡೆಯನಾಗುತ್ತಾನೆ, ರೈತನು ಅವನ ಜೀತದಾಳಾಗುತ್ತಾನೆ ; ಆದರೆ ಸಾಲಿಗನಿಗೆ ಭೂಮಿಯನ್ನು

---

[1] "ಭೂಶಾಸನ ಸುಧಾರಣೆಗಳು ಮತ್ತು ವ್ಯವಸಾಯದ ಬ್ಯಾಂಕುಗಳು."
[2] "ರೈತರ ಸಮಸ್ಯೆ ಮತ್ತು ಅದರ ಪರಿಹಾರ."

ಸ್ವತಃ ರೂಢಿಸುವ ಇಷ್ಟವಾಗಲಿ ಅಭಿಪ್ರಾಯವಾಗಲಿ ಇರುವುದಿಲ್ಲ. ಈ ಬಗೆಯ ಜನವರ್ಗ ಎಲ್ಲ ವಿಧದಿಂದಲೂ ಪ್ರಗತಿಗೆ ಅಡ್ಡಿಯಾಗುತ್ತದೆ.

ರಾನಡೆ ಅಷ್ಟು ಬಲವಾಗಿ ವಾದಿಸಿದ ಭೂನೀತಿಯನ್ನು ಬೊಂಬಾಯಿ ಸರ್ಕಾರ ಎಂದೂ ಸರಿಯಾಗಿ ಆಚರಣೆಗೆ ತರಲಿಲ್ಲ. ಆದರೆ ೧೮೮೪ ರಲ್ಲಿ ಕಂದಾಯ ನೀತಿಯನ್ನು ಸುಧಾರಿಸಲು ತೊಡಗಿತು. ಅವರು ಅನುಸರಿಸಿದ ಮಾರ್ಗದಿಂದ ಬಹುಮಟ್ಟಿನ ಶಾಶ್ವತತೆಗೆ ಅವಕಾಶವಾಯಿತು.

ಮೇಲಿನ ಪುಟಗಳಲ್ಲಿ ರೈತರ ಸಮಸ್ಯೆಯನ್ನು ಕುರಿತ ರಾನಡೆಯವರ ಮುಖ್ಯ ವಾದಗಳನ್ನು ಕೊಡಲಾಗಿದೆ. ಅವುಗಳನ್ನಲ್ಲದೆ ಕೃಷಿಯ ಬೆಳವಣಿಗೆಗೆ ಅಗತ್ಯವಾದ ಹಲವಾರು ವಿಷಯಗಳನ್ನು ಸೂಚಿಸಿದರು. ಅವುಗಳು ಯಾವುವೆಂದರೆ,—ವಿದ್ಯಾಪ್ರಸಾರ; ಕೈಗಾರಿಕೆಗಳ ಪುನರುಜ್ಜೀವನ ಮತ್ತು ಭೂಮಿಯಿಂದ ಹೆಚ್ಚಿನ ರೈತಾಪಿ ವರ್ಗವನ್ನು ಬೇರೆ ಉದ್ಯೋಗಕ್ಕೆ ವರ್ಗಾಯಿಸುವುದು; ತೆರಿಗೆಗಳನ್ನೂ ಆಡಳಿತದ ಖರ್ಚುಗಳನ್ನೂ ಕಡಮೆ ಮಾಡುವುದು; ಅರಣ್ಯ ರಕ್ಷಣೆ, ಗುಡ್ಡ ಬೆಟ್ಟಗಳಿಂದಲೂ ನದೀ ತೀರಗಳಿಂದಲೂ ಗಿಡಗಳನ್ನು ಕಡಿಯುವುದರಿಂದ ಕೃಷಿಗಾಗುವ ಅಪಾಯವನ್ನು ತಪ್ಪಿಸುವುದು.

೧೮೭೦ ರಲ್ಲಿ ಸ್ಥಳೀಯ ಸರಕಾರದ ಪ್ರಶ್ನೆ ಆ ಕಾಲದ ಮುಖ್ಯ ವಿಷಯವಾಯಿತು. ಸರಕಾರ ಒಂದು ನಿರ್ಣಯದ ಮೂಲಕ ಪ್ರಾಂತೀಯ ಹಣಕಾಸಿನ ಅವಕೇಂದ್ರೀಕರಣವನ್ನು ಸಾಧಿಸಲು ಯತ್ನಿಸಿದರು. ಸ್ಥಳೀಯ ಸರಕಾರಗಳ ಬೆಳವಣಿಗೆಗೆ ಅವಕಾಶ ಮಾಡಿಕೊಡುವುದು, ಮುನಿಸಿಪಲ್ ಸಂಸ್ಥೆಗಳನ್ನು ಬಲಪಡಿಸುವುದು, ಆಡಳಿತ ವಿಚಾರಗಳಲ್ಲಿ ದೇಶೀಯರನ್ನೂ ಯುರೋಪಿಯನ್ನರನ್ನೂ ಹೆಚ್ಚುಹೆಚ್ಚಾಗಿ ಸೇರಿಸಿಕೊಳ್ಳುವುದು—ಇವು ವಿಕೇಂದ್ರೀಕರಣದ ಉದ್ದೇಶವಾಗಿತ್ತು. ಸ್ಥಳೀಯ ಸ್ವಯಮಾಡಳಿತ ಸಂಸ್ಥೆಗಳನ್ನು ಬಲಪಡಿಸುವಂತೆ ಒತ್ತಾಯ ಮಾಡುವ ಅನೇಕ ಲೇಖನಗಳನ್ನು ರಾನಡೆ ಸಾರ್ವಜನಿಕ ಪತ್ರಿಕೆಯಲ್ಲಿ ಬರೆದರು. ಚಾರಿತ್ರಿಕ ದೃಷ್ಟಾಂತಗಳ ಬೆಳಕಿನಲ್ಲಿ ವಿಷಯವನ್ನು ಸ್ಪಷ್ಟೀಕರಿಸುವುದು ರಾನಡೆಯವರ ಪದ್ಧತಿಯಾಗಿತ್ತು. ಅದಕ್ಕನುಗುಣವಾಗಿ, ಈ ವಿಷಯಕ್ಕೆ ಸಂಬಂಧಪಟ್ಟ ಅವರ ಬರಹಗಳಲ್ಲಿ "ಇಂಗ್ಲೆಂಡ್ ಮತ್ತು ಇಂಡಿಯಾಗಳಲ್ಲಿ ಸ್ಥಳೀಯ ಸರ್ಕಾರ" ಎಂಬ ಲೇಖನವೊಂದಿದೆ. ಅದರಲ್ಲಿ ಇಂಗ್ಲೆಂಡಿನಲ್ಲಿ ಸ್ಥಳೀಯ ಸರಕಾರ ಸಂಸ್ಥೆಗಳ

ಬೆಳವಣಿಗೆಯನ್ನೂ ಅವುಗಳ ಈಗಿನ ಸ್ಥಿತಿಯನ್ನೂ ಎಚ್ಚರಿಕೆಯಿಂದ ವಿವರಿಸಿ ಭಾರತಕ್ಕೆ ಅವು ಯಾವ ವಿಧದಲ್ಲಿ ಮಾದರಿಯಾಗಬಲ್ಲವು ಮತ್ತು ಯಾವ ವಿಷಯದಲ್ಲಿ ಎಚ್ಚರಿಕೆಯಾಗಿವೆ ಎಂಬುದನ್ನು ತಿಳಿಸಿದ್ದಾರೆ.

೧೮೮೧ರಲ್ಲಿ ಭಾರತ ಸರಕಾರ ಪ್ರಾಂತ ಸರಕಾರಗಳ ಹಣಕಾಸಿನ ಸ್ಥಿತಿಯನ್ನು ಉತ್ತಮಪಡಿಸಿ ಪ್ರಾಂತಗಳು ಸ್ಥಳೀಯ ಸರಕಾರಗಳಿಗೆ ಹೆಚ್ಚಿನ ಸಹಾಯವೊದಗಿಸಿ ಅವುಗಳನ್ನು ಬಲಪಡಿಸಿ ಪ್ರಯೋಜನಕಾರಿಗಳನ್ನಾಗಿ ಮಾಡಬೇಕೆಂದೂ ವಿಧಿಸಿದರು. ಜನ ತಿಳಿವಳಿಕೆಯಿಂದ ಸರಿಯಾಗಿ ಆಡಳಿತ ನಡಸಬಹುದಾದ ಶಾಖೆಗಳನ್ನು ಸ್ಥಳೀಯ ಸಂಸ್ಥೆಗಳನ್ನಾಗಿ ಪರಿವರ್ತಿಸಬೇಕಾಗಿತ್ತು. ಪ್ರಾಥಮಿಕ ವಿದ್ಯಾಭ್ಯಾಸ, ವೈದ್ಯಸಹಾಯ, ಸಣ್ಣಪುಟ್ಟ ಮರಾಮತ್ ಕಾರ್ಯಗಳು, ಅಗತ್ಯವಾದ ಅಂಕಿ ಅಂಶಗಳ ದಾಖಲೆ, ಮಾದರಿ ವ್ಯವಸಾಯ ಕ್ಷೇತ್ರಗಳು, ವ್ಯಾಕ್ಸಿನೇಷನ್, ಪಾಕೀಜು,–ಇವುಗಳನ್ನೆಲ್ಲ ಸ್ಥಳೀಯ ಸಂಸ್ಥೆಗಳಿಗೆ ವರ್ಗಾಯಿಸತಕ್ಕದ್ದೆಂದಾಯಿತು.

ರಾನಡೆ ರಚನಾತ್ಮಕ ಮನೋಭಾವದವರು. ಆದ್ದರಿಂದ ಸರಕಾರ ಸ್ಥಳೀಯ ಸಂಸ್ಥೆಗಳನ್ನು ಬೆಳಸಿ ಸ್ವಯಮಾಡಳಿತ ಪದ್ಧತಿಯನ್ನು ವಿಸ್ತಾರಗೊಳಿಸುತ್ತಾರೆಂದು ತಿಳಿದೊಡನೆಯೆ ಸ್ಥಳೀಯ ಸಂಸ್ಥೆಗಳ ವ್ಯವಸ್ಥೆಯಲ್ಲೂ ಅಧಿಕಾರಗಳಲ್ಲೂ ಅಗತ್ಯವಾಗಿ ಆಗಬೇಕಾದ ಬದಲಾವಣೆಗಳನ್ನು ಕುರಿತು ಬರೆಯಲಾರಂಭಿಸಿದರು. ಪ್ರತಿನಿಧಿ ಸರಕಾರ ಪದ್ಧತಿಯ ಮೂಲಸ್ಥಾನಗಳಾದ ಮುನಿಸಿಪಾಲಿಟಿ ಮತ್ತು ಸ್ಥಳೀಯ ಸಮಿತಿಗಳು ಬಲವಾದ ಸಂಸ್ಥೆಗಳಾಗಿ ಬೆಳೆದು ಶಾಸನಸಭೆಗಳನ್ನು ಪ್ರಾತಿನಿಧಿಕವಾಗಿ ಮಾಡಲು ಸಹಾಯಕವಾಗುವ ಕಾಲವನ್ನು ಗಮನದಲ್ಲಿಟ್ಟುಕೊಂಡು ರಾನಡೆ ಬೊಂಬಾಯಿ ಶಾಸನ ಸಭೆಯ ಹೊಸ ಘಟನೆಯೊಂದನ್ನು ರಚಿಸಿದರು. ರಾನಡೆಯವರ ಈ ಸಲಹೆ ಮುಂದೆ ಒದಗಿ ಬಂದ ಸುಧಾರಣೆಗಳ ದೃಷ್ಟಿಯಿಂದ ಬಹುಮಿತವಾದದ್ದೆಂದು ತೋರಿದರೂ ಆಗಿನ ಸಂದರ್ಭದಲ್ಲಿ ಅದನ್ನು ತೀವ್ರವಾದದ್ದೆಂದು ಪರಿಗಣಿಸುವರೆಂಬ ಅರಿವು ಅವರಿಗಿತ್ತು.

ಇಂಡಿಯಾ ಆಗ ಲಾರ್ಡ್ ರಿಪನ್‌ರ ಉದಾರವಾದ ಆಳ್ವಿಕೆಯಲ್ಲಿತ್ತು. ಸ್ಥಳೀಯ ಸರಕಾರ ಪದ್ಧತಿಯ ಸುಧಾರಣೆಗಳು ಪ್ರಗತಿ ಪಥದಲ್ಲಿದ್ದವು. ೧೮೮೨ರ ಮೇನಲ್ಲಿ ಸ್ಥಳೀಯ ಸರಕಾರದ ಸುಧಾರಣೆಯನ್ನು ಕುರಿತ ನಿರ್ಣಯವೊಂದು ಜಾರಿಗೆ ಬಂದಿತು. ಅದನ್ನು ಕುರಿತು ರಾನಡೆ " ಇದಕ್ಕಿಂತಲೂ

ಉದಾರವಾದ, ಉತ್ತೇಜಕವಾದ, ನಿಜವಾದ ರಾಜ ತಂತ್ರಜ್ಞತೆಯಿಂದ ಕೂಡಿರುವ ರಾಜ್ಯಶಾಸನವನ್ನು ಊಹಿಸುವುದು ಕಷ್ಟವಾಗಿದೆ, ಇಂಡಿಯಾ ದಲ್ಲಂತೂ ಇಂಥ ಪತ್ರವನ್ನು ಅನೇಕ ವರ್ಷಗಳ ಕಾಲದಿಂದ ನೋಡಿಯೇ ಇಲ್ಲ"—ಎಂದು ನುಡಿದರು. ನಿರ್ಣಯದ ಶಿಫಾರಸುಗಳು ಕೆಲವು ವಿಚಾರ ಗಳಲ್ಲಿ ರಾನಡೆ ಮತ್ತು ಸಾರ್ವಜನಿಕ ಸಭಾ ಹೋಗಲು ತಯಾರಿದ್ದುದ ಕ್ಕಿಂತ ಮುಂದೆ ಹೋಗಿದ್ದವು. ಈ ಸಂದರ್ಭದಲ್ಲಿ ರಾನಡೆಯವರು ನುಡಿದ ಎಚ್ಚರಿಕೆಯ ಮಾತುಗಳಿಂದ ಅವರ ಸಾವಧಾನ ಪ್ರಕೃತಿಗೆ ಇನ್ನೊಂದು ನಿದರ್ಶನ ದೊರೆಯುತ್ತದೆ :

"ಇದ್ದಕಿದ್ದಂತೆ ವ್ಯಾಪಕವಾದ ದೂರಗಾಮಿಯಾದ ಕಾನೂನುಗಳನ್ನು ಜಾರಿಗೆ ತರುವುದನ್ನು ಒಪ್ಪತಕ್ಕದ್ದಲ್ಲ. ಹಾಗೆ ಮಾಡುವುದು ಸ್ವತಂತ್ರ ಸಂಸ್ಥೆಗಳ ಸ್ವಾಭಾವಿಕವಾದ ಮತ್ತು ಸುಪುಷ್ಟವಾದ ಬೆಳವಣಿಗೆಗೆ ಹಿತಕಾರಿಯಲ್ಲ. ದಬ್ಬಾಳಿಕೆ ಯನ್ನು ಅನುಸರಿಸುತ್ತಿದ್ದು, ಆ ಕೂಡಲೇ ದೂರಗಾಮಿಯಾದ ಕಾನೂನುಗಳನ್ನು ಇದ್ದಕ್ಕಿದ್ದಂತೆ, ಕಾಲಕ್ಕೆ ಮುಂಚೆ, ಜಾರಿಗೆ ತಂದರೆ ಅದರಿಂದ ಜನ ಉತ್ತಮರಾಗು ವುದರ ಬದಲು ಅಸಂತೃಪ್ತರಾಗುತ್ತಾರೆ . . .

ಜನತೆಗೆ ರಾಜಕೀಯ ಮತ್ತು ಜಾಗೃತಿಯ ಶಿಕ್ಷಣವನ್ನು ಕೊಡುವುದು ಇಂಡಿಯಾ ಸರ್ಕಾರದ ಕಾನೂನಿನ ಗುರಿ ; ಆದರೆ ಈ ಅವಸರದಲ್ಲಿ ಸ್ಥಳೀಯ ಆಡ ಳಿತದಲ್ಲಿ ದಕ್ಷತೆ ಇರಬೇಕಾದದ್ದನ್ನು ಮರೆಯಬಾರದು. ವಾಸ್ತವವಾಗಿ, ಸ್ಥಳೀಯ ಆಡಳಿತದಲ್ಲಿ ದಕ್ಷತೆ ಮಿತವ್ಯಯಗಳನ್ನು ಕಲಿಸುವುದು ರಾಜಕೀಯ ಶಿಕ್ಷಣದ ಒಂದು ಮುಖ್ಯ ಭಾಗ. ಯಾಕೆಂದರೆ ಸ್ವಯಮಾಡಳಿತ ಕಲೆಯಲ್ಲಿ ಯಾವ ಶಿಕ್ಷಣವನ್ನು ಕೊಟ್ಟರೂ ಸ್ಥಳೀಯ ಸರಕಾರದ ವ್ಯವಸ್ಥೆಯಲ್ಲಿ ಅದು ದಕ್ಷತೆ ಮಿತವ್ಯಯಗಳನ್ನು ಕಲಿಸದಿದ್ದರೆ ಅದಕ್ಕೆ ಯಾವ ಶಾಶ್ವತವಾದ ಬೆಲೆಯೂ ಇರಲಾರದು"

ಗುಲಾಬರ ನಿರ್ಣಯದಲ್ಲಿ ವ್ಯಕ್ತವಾದ ಅಭಿಪ್ರಾಯಗಳನ್ನು ಜಾರಿಗೆ ತರುವ ಉದ್ದೇಶದಿಂದ ಬೊಂಬಾಯಿ ಸರಕಾರ ಮರುವರ್ಷ ಎರಡು ಮಸೂದೆ ಗಳನ್ನು ತಂದಿತು. ಅವುಗಳಲ್ಲಿ ಗುರಿಯನ್ನು ಭಂಗಪಡಿಸುವ, ಮ್ಯುನಿಸಿ ಪಲ್ ಸಮಿತಿಗಳ ಅಥವಾ ಸ್ಥಳೀಯ ಸಮಿತಿಗಳ ಆರ್ಥಿಕ ಸ್ವಾತಂತ್ರ್ಯಕ್ಕೆ ಅಡ್ಡಿ ತರುವ, ವಿಷಯಗಳಿವೆಯೇ ಎಂಬ ದೃಷ್ಟಿಯಿಂದ ರಾನಡೆ ಅವು ಗಳನ್ನು ಸಾರ್ವಜನಿಕ ಪತ್ರಿಕೆಯಲ್ಲಿ ಜಾಗರೂಕತೆಯಿಂದ ಪರಿಶೀಲಿಸಿದರು.

ಸಾರ್ವಜನಿಕ ಸಭಾ ದೇಶೀಯ ಸಂಸ್ಥಾನಗಳ ವಿಷಯದಲ್ಲಿ ಆಸಕ್ತಿ ವಹಿಸಿತು. ಉತ್ಸವ ಸಮಯಗಳಲ್ಲಿ ರಾಜರುಗಳಿಗೆ ಸಭಾದ ಪರವಾಗಿ ಅಭಿ ನಂದನ ಬಿನ್ನವತ್ತಳೆಗಳನ್ನು ಕಳಿಸಲಾಗುತ್ತಿತ್ತು. ಅಭಿನಂದನೆಯ ಜೊತೆಗೆ

ಈ ಬಿನ್ನವತ್ತಳೆಗಳಲ್ಲಿ ರಾಜರ ಜವಾಬ್ದಾರಿಗಳನ್ನು ಕುರಿತ ನೇರವಾದ ಬುದ್ಧಿವಾದವೂ, ಆಡಳಿತದ ಸರಿಯಾದ ಮಾರ್ಗಗಳನ್ನು ಕುರಿತ ಸಲಹೆಗಳೂ ಇರುತ್ತಿದ್ದವು. ೧೮೮೦ ರಲ್ಲಿ ರಾನಡೆ ಸಭಾದ ಪತ್ರಿಕೆಯಲ್ಲಿ "ದೇಶೀಯ ಸಂಸ್ಥಾನಗಳಿಗೊಂದು ಘಟನೆ" ಎಂಬ ಲೇಖನವನ್ನು ಬರೆದಿದ್ದರು. ಅದರ ಮುಖ್ಯಾಂಶಗಳು ಈ ರೀತಿ ಇವೆ: (೧) ಮಹಾರಾಜರು ಮಂತ್ರಿಯನ್ನು ನೇಮಿಸುವುದಕ್ಕೆ ಮೊದಲು ಜವಾಬ್ದಾರಿಯುತನಾದ ಮಂತ್ರಿಯ ಹೆಸರನ್ನು ಸೂಚಿಸಬೇಕು. ಆ ಸೂಚನೆ ಬ್ರಿಟಿಷ್ ಪ್ರತಿನಿಧಿಯ ಒಪ್ಪಿಗೆಗೆ ಒಳಗಾಗಬೇಕು. ರಾಜದ್ರೋಹ, ಅನರ್ಹತೆ, ತಪ್ಪಿತ, ದುರ್ನಡತೆ ಇವುಗಳಲ್ಲಿ ಯಾವುದಾದರೂ ರುಜುವಾತಾದ ಸಂದರ್ಭಗಳಲ್ಲಿ ಮಾತ್ರ ಮಂತ್ರಿಯನ್ನು ತೆಗೆಯಬಹುದು. (೨) ರಾಜನು ಮಂತ್ರಿಯ ಆರ್ಡರುಗಳಮೇಲೆ ಅಪೀಲು ರೀತಿಯಲ್ಲಿ ಮಾತ್ರ ಅಧಿಕಾರವನ್ನು ಉಪಯೋಗಿಸತಕ್ಕದ್ದು. (೩) (ಆಡಳಿತ ವಿಚಾರಗಳಿಗಾಗಿ) ಒಂದು ಕೌನ್ಸಿಲ್ ಅಥವಾ ದರ್ಬಾರು ಇರತಕ್ಕದ್ದು. ಈ ಕೌನ್ಸಿಲಿಗೆ ಪರಮಾವಧಿ ಅಧಿಕಾರವಿರತಕ್ಕದ್ದು. ಅದರ ನಿರ್ಣಯವಿಲ್ಲದೆ ಯಾವ ಹೊಸ ತೆರಿಗೆಯನ್ನೂ ವಿಧಿಸಕೂಡದು, ಹೊಸ ಕಾನೂನನ್ನು ಜಾರಿಗೆ ತರಕೂಡದು, ಅಥವಾ ಹಳೆಯದನ್ನು ಬದಲಾಯಿಸಕೂಡದು. (೪) ಭೂಕಂದಾಯವನ್ನು ಶಾಶ್ವತವಾಗಿ ಅಥವಾ ದೀರ್ಘಾವಧಿಕಾಲಕ್ಕೆ, ವ್ಯವಸ್ಥಿತ ನಿಯಮಗಳನ್ನನುಸರಿಸಿ ನಿಗದಿ ಮಾಡಬೇಕು. (೫) ಸಂಸ್ಥಾನದ ಸಾರ್ವಜನಿಕ ಮತ್ತು ಸ್ವಂತ ಖರ್ಚುಗಳನ್ನು ಬೇರ್ಪಡಿಸಬೇಕು. ಒಂದು ಸಾರಿ ಗೊತ್ತುಮಾಡಿದ ಅಧಿಕಾರಿವರ್ಗದ ಪಟ್ಟಿಯನ್ನು ಕೌನ್ಸಿಲ್ ಮತ್ತು ದರ್ಬಾರಿನ ಒಪ್ಪಿಗೆಯಿಲ್ಲದೆ ಬದಲಾಯಿಸಬಾರದು. ಕಾರ್ಯಾಂಗ ನ್ಯಾಯಾಂಗಗಳನ್ನೂ ಸಿವಿಲ್ ಮತ್ತು ಮಿಲಿಟರಿ ಕರ್ತವ್ಯಗಳನ್ನೂ ಬೇರ್ಪಡಿಸಬೇಕು. ಅಧಿಕಾರಸ್ಥಾನಗಳನ್ನು ಅರ್ಹತೆಯುಳ್ಳವರಿಗೆ ಕೊಡಬೇಕು. ರಾಜ್ಯದ ಘಟನೆ ಲಿಖಿತ ರೂಪದಲ್ಲಿರಬೇಕು. ವಾರ್ಷಿಕ ಆಯವ್ಯಯದ ಹೇಳಿಕೆಗಳು ಪ್ರಕಟವಾಗಬೇಕು. ಸ್ಥಳೀಯ ಸರಕಾರ ಪದ್ಧತಿಯನ್ನು ತಕ್ಕ ತಹಬಂದಿಯೊಡನೆ ಬಲಪಡಿಸಬೇಕು.

' ಸಾರ್ವಜನಿಕ ಸಭಾ'ದ ಪತ್ರಿಕೆಯ ಸಂಚಿಕೆಗಳನ್ನು ತಿರುವಿಹಾಕುವಾಗ ನಮಗೆ ರಾನಡೆಯವರ ಧಾರ್ಮಿಕೋತ್ಸಾಹವೂ, ಮದುವೆಯ ವಯಸ್ಸಿನ ಒಪ್ಪಿಗೆಯನ್ನು ಹೆಚ್ಚಿಸುವುದು, ವಿಧವೆಯರನ್ನು ಬಲಾತ್ಕಾರವಾಗಿ

ಆ ಸ್ಥಿತಿಯಲ್ಲಿಡುವುದನ್ನು ತಪ್ಪಿಸುವುದು–ಇಂಥ ಸಮಾಜ ಸುಧಾರಣೆಗಳಲ್ಲಿ ಆಸಕ್ತಿಯೂ ತೋರಿಬರುತ್ತವೆ. ಈ ವಿಷಯಗಳನ್ನು ಮುಂದೆ ಗಮನಿಸುವುದರಿಂದ ಈಗ ಶಿಕ್ಷಣ ವಿಚಾರಗಳಲ್ಲಿ ರಾನಡೆಯವರ ಅಭಿಪ್ರಾಯಗಳನ್ನು ಪರಿಶೀಲಿಸೋಣ.

ಸ್ಥಳೀಯ ಸಾಧನಗಳನ್ನು ಬೆಳಸಿ ಉಪಯೋಗಿಸಿಕೊಳ್ಳುವ ಮಾರ್ಗ ರಾನಡೆಯವರಿಗೆ ಇಷ್ಟವಾಗಿತ್ತು. ಅಧಿಕಾರದ ಕೇಂದ್ರೀಕರಣದಲ್ಲೂ ಅಧಿಕಾರಿಗಳ ಮಿತಿಮೀರಿದ ಹತೋಟಿಗೆ ಸಂಸ್ಥೆಗಳನ್ನು ಒಳಪಡಿಸುವ ವಿಷಯದಲ್ಲೂ ಅವರಿಗೆ ನಂಬಿಕೆಯಿರಲಿಲ್ಲ. ೧೮೮೨ರಲ್ಲಿ ರಾನಡೆ ಬರೆದ "ಪ್ರಾಥಮಿಕ ವಿದ್ಯಾಭ್ಯಾಸ ಮತ್ತು ದೇಶೀಯ ಶಾಲೆಗಳು" ಎಂಬ ಲೇಖನದಲ್ಲಿ ಅವರ ಈ ಗುಣಗಳು ವ್ಯಕ್ತವಾಗುತ್ತವೆ. ಈ ಲೇಖದ ಆರಂಭದಲ್ಲಿಯೇ ಉಪಯೋಗಕರವಾದ ಸಲಹೆಗಳನ್ನು ಕೊಡುವ ಮತ್ತು ಸಮಸ್ಯೆಯನ್ನು ಪೂರ್ವಾನುಭವಗಳ ಮತ್ತು ವ್ಯವಸ್ಥಿತ ಸಂಗತಿಗಳ ಬೆಳಕಿನಲ್ಲಿ ಪರೀಕ್ಷಿಸುವ ಅವರ ಪ್ರವೃತ್ತಿಯನ್ನು ಕಾಣಬಹುದು.

"ಇಂಡಿಯದ ವಿವಿಧ ಭಾಗಗಳಲ್ಲಿ ಕಳೆದ ಇಪ್ಪತ್ತೈದು ವರ್ಷಗಳಿಂದ ಆಚರಣೆಯಲ್ಲಿರುವ ಪ್ರಾಥಮಿಕ ವಿದ್ಯಾಭ್ಯಾಸ ಪದ್ಧತಿಗಳನ್ನು ಪರಿಶೀಲಿಸಿ ಅವುಗಳ ಪರಿಣಾಮಗಳನ್ನು ತಿಳಿಯುವುದಕ್ಕೆ ಇದು ಸಕಾಲವಾಗಿದೆ. ಹಾಗೆ ಅರಿತು ಸಂಗತಿಗಳ ಆದಿಪಾಯವನ್ನು ನಿರ್ಮಿಸಿದರೆ—ಅದರ ಮೇಲೆ, ಸಂಬಂಧಪಟ್ಟ ಅಧಿಕಾರಿಗಳು–ಶಿಕ್ಷಣ ಸಮಿತಿಯ ಕೆಲಸಗಳ ಫಲವಾಗಿ—ಮುಂದಿನ ವ್ಯವಸ್ಥೆಯನ್ನು ಮುಂದುವರಿಸಬಹುದೆಂದು ನಿರೀಕ್ಷಿಸಬಹುದು. ಶಿಕ್ಷಣ ಸಮಿತಿಯ ವಿಚಾರಣೆಯ ಮುಖ್ಯಗುರಿ ಸಾಮ್ರಾಜ್ಯದಲ್ಲಿ ಪ್ರಾಥಮಿಕ ಶಿಕ್ಷಣದ ಸ್ಥಿತಿಯನ್ನು ಅರಿತು ಅದರ ವ್ಯಾಪ್ತಿಯನ್ನು ಹೆಚ್ಚಿಸಿ ಉತ್ತಮಪಡಿಸುವುದಾಗಿದೆ."

ಈಗಿರುವ ಸ್ಥಿತಿಯಲ್ಲಿ ಅಧಿಕಾರಿಗಳು ವ್ಯಾಕರಣ, ಭೂವಿವರಣೆ ಮತ್ತು ಚರಿತ್ರೆ ಇವುಗಳ ಬಾಯಿಪಾಠಕ್ಕೆ ಹೆಚ್ಚು ಪ್ರಾಮುಖ್ಯವನ್ನು ಕೊಟ್ಟು ಜೀವನಕ್ಕೆ ಬೇಕಾದ ವಾಸ್ತವಾಂಶಗಳನ್ನು ಉದಾಸೀನ ಮಾಡುತ್ತಾರೆ ಎಂದು ತಿಳಿಸಿ, ರಾಷ್ಟ್ರಕ್ಕೆ ಆಧಾರಭೂತರಾದ ರೈತಾಪಿ ಜನರ ಕಡೆ ಗಮನ ಕೊಡುವುದು ಆವಶ್ಯಕವೆಂದು ಹೇಳುತ್ತಾರೆ.

"ವಿದ್ಯೆಯನ್ನು ಕಲಿಯಿರಿ ಎಂದು ಹೇಳುವ ಮೊದಲು ಅವರಿಗೆ (ರೈತರಿಗೆ) ಉತ್ತಮ ಆಹಾರವನ್ನೂ ಬಟ್ಟೆಯನ್ನೂ ವಸತಿಯನ್ನೂ ಕಲ್ಪಿಸಬೇಕು. ಸದ್ಯಕ್ಕೆ ನಿತ್ಯೋಪಯೋಗಕ್ಕೆ ಬೇಕಾದ ಓದುಬರಹಗಳನ್ನು ಕಲಿಸಿದರೆ ಸಾಕು; ಅಷ್ಟು

ಮಟ್ಟಿನ ವಿದ್ಯೆಯನ್ನು ಗ್ರಾಮಶಾಲೆಗಳು ಸುಲಭವಾಗಿಯೂ ತೃಪ್ತಿಕರವಾಗಿಯೂ ಒದಗಿಸುತ್ತವೆ."

ಹೀಗೆ ವಿದ್ಯಾಭ್ಯಾಸವನ್ನು ಒದಗಿಸಲು ಬೊಂಬಾಯಿ ಪ್ರಾಂತದಲ್ಲಿ ೧೪೦೦೦ ಶಾಲೆಗಳನ್ನು ತೆರೆಯಬೇಕಾಗುತ್ತದೆಯೆಂದೂ ಈಗಿನ ರೀತಿಯಲ್ಲಿ ಅದಕ್ಕಾಗಿ ಪ್ರತಿವರ್ಷ ೧೪ ಲಕ್ಷ ರೂಪಾಯಿಗಳು ಬೇಕಾಗುತ್ತವೆಯೆಂದೂ ರಾನಡೆ ಲೆಕ್ಕ ಹಾಕಿದರು. ಆದರೆ ತಾವು ಸೂಚಿಸುವ ರೀತಿಯಲ್ಲಿ ವ್ಯವಸ್ಥೆ ಮಾಡುವುದಾದರೆ ವರ್ಷಕ್ಕೆ ನಾಲ್ಕು ಲಕ್ಷ ರೂ. ಗಳ ವೆಚ್ಚದಲ್ಲಿ, ೨೦೦ ಜನ ಸಂಖ್ಯೆಯಿರುವ ಗ್ರಾಮಕ್ಕೆ ಒಂದು ಶಾಲೆಯಂತೆ ಸ್ಥಾಪಿಸಬಹುದೆಂದು ಹೇಳುತ್ತಾರೆ. ಖಾಸಗಿಯಾಗಿ ಈಗ ನಡಸುತ್ತಿರುವ ಗ್ರಾಮಶಾಲೆಗಳನ್ನು ಮಂಜೂರು ಮಾಡಿ, ಅಲ್ಲಿಗೆ ಬರುವ ಖಾಯಂ ವಿದ್ಯಾರ್ಥಿಗಳ ಸಂಖ್ಯೆಗನು ಗುಣವಾಗಿ ಸ್ವಲ್ಪ ಗ್ರಾಂಟನ್ನೂ, ಸ್ಕಾಲರ್-ಷಿಪ್-ಪರೀಕ್ಷೆಗಳಿಗೆ ಕಳಿಸುವ ವಿದ್ಯಾರ್ಥಿಗಳ ಪರೀಕ್ಷೆಯ ಫಲಿತಾಂಶದ ಸಂಖ್ಯೆಗನುಗುಣವಾಗಿ ಸ್ವಲ್ಪ ಗ್ರಾಂಟನ್ನೂ ಕೊಡುವುದರ ಮೂಲಕ ಶಾಲೆಗಳನ್ನು ಹೆಚ್ಚಿಸುವುದು ಸಾಧ್ಯ ವೆಂದು ತಿಳಿಸುತ್ತಾರೆ. ಖಾಸಗಿ ಶಾಲೆಗಳನ್ನು ತೆರೆಯಲು ಪ್ರೋತ್ಸಾಹ ಕೊಡಬೇಕು; ಅರ್ಹತೆಯುಳ್ಳ ಉಪಾಧ್ಯಾಯರಿಗೆ ಶಾಲೆಗಳನ್ನು ತೆರೆಯಲು ಅವಕಾಶ ಮಾಡಿಕೊಡಬೇಕು. ಶಾಲೆಗಳನ್ನು ನಡೆಸಲು ಬೇಕಾದ ಹಣ ವನ್ನು ಗ್ರಾಮಸ್ಥರಿಂದ ಪಡೆಯುವಂತಿರಬೇಕು; ಮತ್ತು ಪೂರಕವಾಗಿ ಸರ ಕಾರವು ಸಹಾಯಧನವನ್ನು ಕೂಡಿಸಿಕೊಡಬೇಕು. ಹೀಗೆ ಮಾಡುವುದ ರಿಂದ, ನಿರುದ್ಯೋಗಿಗಳಾದ ಅನೇಕ ಯುವಕರು ಶಾಲೆಗಳನ್ನು ತೆರೆಯಲು ಮುಂದೆ ಬರುವರು—ಎಂದು ನುಡಿದರು.

ಪ್ರಾಥಮಿಕ ವಿದ್ಯಾಭ್ಯಾಸವನ್ನು ಹೆಚ್ಚಿಸುವ ಉದ್ದೇಶದಿಂದ ಪ್ರೌಢ ಶಿಕ್ಷಣಕ್ಕೆ ನೀಡುತ್ತಿದ್ದ ಸಹಾಯವನ್ನು ನಿಲ್ಲಿಸಬೇಕೆಂಬ ಮಾತು ಆಗ ಕೇಳ ಬರುತ್ತಿತ್ತು. ರಾನಡೆ ಆ ಬಗೆಯ ಕಾರ್ಯಕ್ರಮಕ್ಕೆ ವಿರೋಧವಾಗಿದ್ದರು. ಅದರಿಂದ ದೇಶದ ಪ್ರಗತಿಗೆ ಅಡ್ಡಿಯಾಗುವುದೆಂದು ತಿಳಿದಿದ್ದರು:

" ಈಗಿನ ಶಿಕ್ಷಣ ಕ್ರಮದ ಅವಕಾಶವನ್ನು ಪಡೆಯುತ್ತಿರುವವರು ಮಧ್ಯಮ ವರ್ಗದವರು ಮತ್ತು ವರ್ತಕರು—ಸುಮಾರು ಶೇಕಡ ಹತ್ತರಷ್ಟು ಜನ. ಇಂಡಿ ಯದ ಪುನಸ್ಸಂಜೀವನ ಕಾರ್ಯದ ಮುಂದಾಳುತನ ಈ ವರ್ಗಕ್ಕೆ ಸೇರಿವೆ, ಇವರು ನೂತನ ಭಾವಗಳಿಂದ ವ್ಯಾಪ್ತರಾಗುವವರೆಗೆ, ವ್ಯಾಪಕವಾದ ಅಥವಾ ಶಾಶ್ವತವಾದ ಪ್ರಗತಿಯನ್ನು ನಿರೀಕ್ಷಿಸುವುದು ವ್ಯರ್ಥ. ಜನಸಾಮಾನ್ಯರ ಶಿಕ್ಷಣ ಕಾರ್ಯಕ್ಕೆ

ಬೇಕಾದ ಉಪಾಧ್ಯಾಯರನ್ನು ಈ ವರ್ಗದವರು ಮಾತ್ರವೇ ಒದಗಿಸಬಲ್ಲರು. ಇಂಡಿಯದ ಸದ್ಯದ ಸಾಮಾಜಿಕ ಆರ್ಥಿಕ ಸ್ಥಿತಿಯಲ್ಲಿ, ಎಲ್ಲ ರೀತಿಗಳಲ್ಲೂ ಕಾರ್ಯೋನ್ಮುಖರಾಗಲು ಈ ವರ್ಗಕ್ಕೆ ಅವಕಾಶ ಕೊಡಬೇಕು. ಕೆಳವರ್ಗದ ಜನರು ಪ್ರಾಥಮಿಕ ಶಿಕ್ಷಣವನ್ನು ಹೊಂದಲು ಸಹಾಯ ಮಾಡುವುದು ಸರಕಾರದ ಕರ್ತವ್ಯವಾಗಿರುವಂತೆ, ಮಧ್ಯಮವರ್ಗದವರು ಪ್ರೌಢಶಿಕ್ಷಣ ಹೊಂದಲು ಸಹಾಯ ಮಾಡುವುದೂ ಸರಕಾರದ ಕರ್ತವ್ಯವಾಗಿದೆ."

ರಾನಡೆಯವರ ಬರಹಗಳನ್ನು ಓದುವಾಗ ಶೈಲಿಯೇ ಮನುಷ್ಯ ಎಂಬ ಮಾತು ನೆನಪಿಗೆ ಬರುತ್ತದೆ. ಅವರ ವಾಕ್ಯಗಳು ತೂಕವಾಗಿ, ಅರ್ಥದಿಂದ ಘನವಾಗಿ ಸಮತೂಕವಾಗಿ ಮೆರೆಯುತ್ತವೆ. ಅವರು ಮದ್ದಿನ ವಸ್ತುವಿನಂತೆ ಕಿಡಿಗೆದರಿ ಬೆರಗುಗೊಳಿಸುವುದಿಲ್ಲ. ಒಂದೇ ಸಮನಾಗಿ ಪ್ರೌಢವಾದ, ಘನವಾದ, ನಾದಪೂರ್ಣವಾದ ಮತ್ತು ಸುಸ್ಪಷ್ಟವಾದ ಗದ್ಯವನ್ನು ರಚಿಸುತ್ತಾರೆ. ಅವರು ಬಿರುಸಿನ ಪ್ರಕಾಶವನ್ನಾಗಲಿ ಬಣ್ಣಬಣ್ಣದ ಬೆಳಕನ್ನಾಗಲಿ ಚೆಲ್ಲುವುದಿಲ್ಲ. ಒಂದೇ ಸಮನಾಗಿ ಬೆಳಗುವ ಬೆಳಕು ದೊರೆಯುತ್ತದೆ ಅವರ ಲೇಖಗಳಲ್ಲಿ. ಕವಿತಾವೇಶದ ರಭಸವಾಗಲಿ ರಾಗೋನ್ಮತ್ತತೆಯ ಬೆರಗಾಗಲಿ ಅವರಲ್ಲಿಲ್ಲ. ಆದರೆ ಆಗಾಗ ಉಜ್ಜ್ವಲವಾದ ವಾಸ್ತವವಾದ ರೂಪಕಗಳ ಸಿಡಿತವನ್ನು ಕಾಣಬಹುದು. ಅವರ ಬರವಣಿಗೆಯಲ್ಲಿ ಗಾಢವಾದ ರಾಗ ಪ್ರವೃತ್ತಿ ತೋರಿ ಬರುವುದು ಸಾಮಾನ್ಯವಾಗಿ ಮನವೊಲಿವ ಸಂಗತಿಗಳ ಜೊಂಪೆಯ ಕೊನೆಯಲ್ಲಿ. ಅವರ ಲೇಖನದ ಕೊನೆಯ ಭಾಗ (ಪ್ಯಾರಾ) ಅನೇಕ ವೇಳೆ ಮನವೊಲಿವ ಭಾವಸರಣಿಯ ಪರಾಕಾಷ್ಠದಶೆಯನ್ನು ಮುಟ್ಟುತ್ತದೆ; ಶಾಸ್ತ್ರೀಯವಾದ ಸಂಯಮದಿಂದ ಕೂಡಿಬಂದ ಭಾವಗಳು ಅಲ್ಲಿ, ಕೊನೆಯಲ್ಲಿ, ಪ್ರಕಾಶಮಾನವಾದ ಬೆಳಕಿನಿಂದ ಬಿರಿಯುವಂತೆ ತೋರುತ್ತವೆ. ಅವರ [ಇಂಗ್ಲಿಷ್] ಲೇಖನಗಳಲ್ಲಿ ಅಲ್ಲಲ್ಲಿ ಅಂದವಿಲ್ಲದ ರೀತಿಗಳು ಕಂಡುಬರುತ್ತವೆ; ಏನು ಹೇಳಬೇಕೆಂಬ ಭಾವದ ಕಡೆ ಅವರ ಗಮನ ಮುಖ್ಯವಾಗಿ ಇದ್ದದ್ದರಿಂದ ಹಾಗಾಗಿರಬಹುದು; ಪ್ರಾಯಶಃ ಯಾವುದೋ ಒಂದು ಮಟ್ಟವನ್ನು ಮೀರಿದ ಮೇಲೆ ಅವರು ಭಾಷೆಯ ರೂಪದ ಕಡೆ ಮನಸ್ಸು ಕೊಡುತ್ತಿರಲಿಲ್ಲವೇನೊ. ಇಂಗ್ಲಿಷ್ ಅವರ ತಾಯ್ನುಡಿಯಲ್ಲವೆಂಬುದನ್ನು ನೆನಪಿಟ್ಟರೆ ಅವರು ಆ ಭಾಷೆಯ ಮೂಲಕ ತಮ್ಮ ಅಭಿಪ್ರಾಯಗಳನ್ನು ಎಷ್ಟು ಶಕ್ತಿಯುತವಾಗಿ ವ್ಯಕ್ತಪಡಿಸಿದರೆಂದು ಅಚ್ಚರಿಗೊಳ್ಳದಿರೆವು.

## ೬. ಪುಣೆ, ೧೮೭೧–೧೮೭೩

ರಾನಡೆಯವರ ಅಭಿಪ್ರಾಯಗಳನ್ನು ತಿಳಿಯುವ ಅವಸರದಲ್ಲಿ ಕಾಲಾನುಸರಿಯಾದ ಘಟನೆಗಳನ್ನು ಮೀರಿ ಮುಂದೆ ಬಂದಿದ್ದೇವೆ. ಈಗ ಹಿಂದಿರುಗಬೇಕು. ೧೮೭೩ ರ ಅಕ್ಟೋಬರಿನಲ್ಲಿ ರಾನಡೆಯವರ ಹೆಂಡತಿ ಸಖೂಬಾಯಿ ತೀರಿಹೋದರು. ಆಕೆ ಕ್ಷಯದಿಂದ ನರಳುತ್ತಿದ್ದರು. ರಾನಡೆ ಆಕೆಯನ್ನು ಬಹು ಎಚ್ಚರಿಕೆಯಿಂದ ನೋಡಿಕೊಂಡರು. ರಾತ್ರಿ ಎದ್ದು ಕಾಲಕಾಲಕ್ಕೆ ಔಷಧ ಕೊಡುತ್ತಿದ್ದರು. ಸಖೂಬಾಯಿಯಲ್ಲಿ ಮನಸ್ಸನ್ನು ಸೆಳೆಯುವ ದೀನತೆಯಿತ್ತು. ಆಕೆ ಪತಿಯ ಪ್ರೀತಿಯನ್ನು ಪೂರ್ಣವಾಗಿ ಸಂಪಾದಿಸಿದ್ದರು. ಆಕೆಯ ಸಾವು ರಾನಡೆಗೆ ಬಹುದೊಡ್ಡ ಆಘಾತವಾಯಿತು. ಆಕೆಯ ಮರಣಾನಂತರ ಒಂದು ವರ್ಷಕಾಲದವರೆಗೂ ರಾನಡೆ ಬಹುದುಃಖ ದಲ್ಲಿದ್ದರು; ಅವರು ಕಣ್ಣೀರಿಡದ ದಿನವಿರಲಿಲ್ಲ. ಸಂಜೆಯ ಊಟವಾದ ಮೇಲೆ ನಿದ್ದೆ ಬರುವವರೆಗೂ ತುಕಾರಾಮನ ಗೀತಗಳನ್ನು ಓದುತ್ತ ಸಮಾ ಧಾನ ಪಡೆಯಲು ಯತ್ನಿಸುತ್ತಿದ್ದರು.

ಹೆಂಡತಿ ಸತ್ತ ಒಂದು ತಿಂಗಳ ಮೇಲೆ ಸ್ವಲ್ಪ ಕಾಲದಲ್ಲಿಯೇ ರಾನಡೆಗೆ ಎರಡನೆಯ ಮದುವೆಯಾಯಿತು. ಈ ಮದುವೆ ನಿಜವಾಗಿ ರಾನಡೆಯ ತಂದೆಯ ಕೆಲಸ. ಪಿತೃಭಕ್ತಿಯುಳ್ಳ ರಾನಡೆ ತಂದೆಯ ಸಂಚನ್ನು ಮೀರ ದಾದರು. ಸಮಾಜ ಸುಧಾರಕನಾದ ಮಗ ಈ ಸಂದರ್ಭದಲ್ಲಿ ವಿಧವೆಯನ್ನು ಮದುವೆಯಾಗುವುದು ತನ್ನ ಕರ್ತವ್ಯವೆಂದು ತಿಳಿದು ಹಾಗೆ ಮಾಡಬಹು ದಾಗಿ ತಂದೆ ಹೆದರಿದರು. ಆಚಾರವಂತರಾದ ತಂದೆ ತಮ್ಮ ಕುಟುಂಬದಲ್ಲಿ ಆ ರೀತಿಯ ಮದುವೆ ನಡೆಯುವುದನ್ನು ಹೇಗಾದರೂ ತಪ್ಪಿಸಲೇಬೇಕೆಂದು ನಿರ್ಧರಿಸಿದರು. ರಾನಡೆಯ ಬೊಂಬಾಯಿ ಸ್ನೇಹಿತರು ಅವರ ಮೇಲೆ ಒತ್ತಾಯ ಮಾಡಬಹುದೆಂದು ತಿಳಿದು ತಂದೆ ತಮ್ಮ ಕೆಲಸವನ್ನು ಶೀಘ್ರವಾಗಿ ಸಾಧಿಸಲು ತೊಡಗಿದರು.

ಆ ಸಮಯದಲ್ಲಿ ಮಾಧವರಾವ್ ಆಬ್ಬಾ ಸಾಹೇಬ್ ಎಂಬ ಶ್ರೀಮಂತ ರೊಬ್ಬರು ತಮ್ಮ ಮಗಳು ರಮಾಬಾಯಿಯ ಮದುವೆ ಮಾಡುವ ಉದ್ದಿಶ್ಯ ಪುಣೆಗೆ ಬಂದಿದ್ದರು. ಅವರು ರಾನಡೆಯ ತಂದೆಗೆ ಪರಿಚಿತರು. ಇಬ್ಬರೂ

ಸೇರಿ ಮಾತಾಡಿದರು. ಕುಟುಂಬದ ಆಪ್ತನೊಬ್ಬನನ್ನು ಹುಡುಗಿ ಇರು ವೆಡೆಗೆ ಕಳಿಸಿದರು. ಆತನು ಹೋಗಿ ವಿಚಾರಿಸಿಕೊಂಡು ಬಂದು ಕುಲ ಗೋತ್ರ ಘನತೆಗಳು ಸರಿಯಾಗಿವೆ ಎಂದು ವರದಿ ಮಾಡಿದನು. ಆಮೇಲೆ ಹುಡುಗಿಯನ್ನು ಕರೆಸಲಾಯಿತು.

ಈ ನಡುವೆ ತಂದೆ ಮಕ್ಕಳ ಮಾತುಕಥೆ ನಡೆಯಿತು. ರಾನಡೆ ಪುನಃ ಮದುವೆಯಾಗಲು ಇಷ್ಟವಿಲ್ಲವೆಂದು ತಿಳಿಸಿದರು. ತಾವು ಮಗುವಲ್ಲವೆಂದೂ ೩೧ ವರ್ಷ ವಯಸ್ಸಿನ ಮನುಷ್ಯನೆಂದೂ, ತಮ್ಮನ್ನು ಬಲವಂತಪಡಿಸಕೂಡ ದೆಂದೂ ಹೇಳಿದರು. ತಂದೆಯ ಮನಸ್ಸಿನ ಭಯವನ್ನು ನಿವಾರಿಸುವುದಕ್ಕಾಗಿ ವಿಧವೆಯನ್ನು ಮದುವೆಯಾಗುವುದಿಲ್ಲವೆಂದು ಮಾತು ಕೊಡುವುದಾಗಿ ತಿಳಿ ಸಿದರು. ತಂದೆ ಯಾವ ಮಾತನ್ನೂ ಕಿವಿಯಮೇಲೆ ಹಾಕಿಕೊಳ್ಳದೆ ಕಠಿನ ರಾಗಿದ್ದರು. ಎರಡೇ ಮಾರ್ಗಗಳಿದ್ದಂತೆ ತೋರಿತು ರಾನಡೆಗೆ—ತಂದೆಯ ಮಾತಿಗೆ ಒಪ್ಪುವುದು ಇಲ್ಲವೆ ಅವರೊಡನೆ ವಿರೋಧಕಟ್ಟಿಕೊಳ್ಳುವುದು. ಹಾಗೂ ಆರು ತಿಂಗಳ ಅವಕಾಶವನ್ನು ಕೇಳಿದರು. ಅದಕ್ಕೂ ತಂದೆ ಸಿದ್ಧ ವಾಗಿರಲಿಲ್ಲ. ಆಗ ರಾನಡೆ ತಮ್ಮ ಹೋರಾಟವನ್ನು ನಿಲ್ಲಿಸಿ ಬಲವಂತದ ಮದುವೆಗೆ—ತತ್‌ಕ್ಷಣದ ಮದುವೆಗೆ ಒಪ್ಪಿದರು; ಕೆಲವು ಷರತ್ತುಗಳನ್ನು ಮಾತ್ರ ಹಾಕಿದರು: ಹೆಣ್ಣು ಒಳ್ಳೆಯ ವಂಶದವಳಾಗಿರಬೇಕು, ಬೆಳೆದಿರ ಬೇಕು; ಬಾಹ್ಯ ಸೌಂದರ್ಯಕ್ಕಿಂತ ಹೆಚ್ಚಾಗಿ ಚುರುಕು ಬುದ್ಧಿಯುಳ್ಳವಳಾ ಗಿರಬೇಕು.

ಒಂದು ಸಂಜೆ ರಾನಡೆಯ ಮನೆಗೆ ಹೆಣ್ಣನ್ನು ಕರೆತಂದರು. ರಾನಡೆ ಮೊದಲ ಬಾರಿಗೆ ರಮಾಬಾಯಿಯನ್ನು ನೋಡಿದರು. ಆಕೆಯ ತಂದೆ ಯನ್ನು ಕುರಿತು ಹೇಳಿದರು:

"ತೆರೆದ ಕಣ್ಣಿಂದ ಎಲ್ಲವನ್ನೂ ನೋಡಿ, ನಿಮ್ಮ ಮಗಳನ್ನು ನನಗೆ ಕೊಡಲು ಯೋಚಿಸಿದ್ದೀರಾ? ನೀವು ವಯಸ್ಸಾದವರು, ಜಮೀನ್ದಾರರು; ನಾನು ವಿಧವಾ ವಿವಾಹಪಕ್ಷಕ್ಕೆ ಸೇರಿದ ಸಮಾಜ ಸುಧಾರಕ. ನಾನು ಗಟ್ಟಿಮುಟ್ಟಾಗಿ ತೋರಿ ದರೂ ನನ್ನ ಕಣ್ಣು ಕಿವಿಗಳು ದೋಷಯುತವಾಗಿವೆ. ಅಲ್ಲದೆ ನಾನು ಯೂರೋಪಿಗೆ ಹೋಗುವವನಿದ್ದೇನೆ; ಹಿಂದಿರುಗಿದ ಮೇಲೆ ಪ್ರಾಯಶ್ಚಿತ್ತವನ್ನು ಆಚರಿಸುವುದಿಲ್ಲ."

ತಮಗೆ ಎಲ್ಲ ವಿಷಯವನ್ನೂ ತಿಳಿಸಿರುವುದಾಗಿಯೂ ಮಗಳನ್ನು ಕೊಡಲು ನಿರ್ಧರಿಸಿರುವುದಾಗಿಯೂ ರಮಾಬಾಯಿಯ ತಂದೆ ಹೇಳಿದರು. ರಾನಡೆ ಕೊಂಚ ಹೊತ್ತು ಮೌನವಾಗಿದ್ದು, ಸದ್ಯಕ್ಕೆ ನಿಶ್ಚಿತಾರ್ಥವಾಗ

ಲೆಂದೂ ಮದುವೆ ಒಂದು ವರ್ಷದ ಮೇಲೆ ನಡೆಯಲೆಂದೂ ಕೋರಿದರು. ಹೆಣ್ಣಿನ ತಂದೆ ಅದಕ್ಕೆ ಒಪ್ಪಲಿಲ್ಲ. ರಾನಡೆಯ ತಂದೆಯ ಸಲಹೆಯನ್ನು ಕೇಳಬೇಕೆಂದಾಯಿತು.

ಮದುವೆಯನ್ನು ಮುಂದಕ್ಕೆ ಹಾಕಿದರೆ ವೃದ್ಧಾಪ್ಯದಲ್ಲಿ ತಮ್ಮ ಮನಃಶಾಂತಿಯೇ ಕೆಡುವುದೆಂದು ರಾನಡೆಯ ತಂದೆ ಹೇಳಿದರು. ಹೆಣ್ಣನ್ನು ಆಗ ಹಿಂದಕ್ಕೆ ಕಳಿಸುವುದು ಅವರ ಮನೆತನಕ್ಕೆ ಅವಮಾನ ಮಾಡಿದಂತೆ ಎಂದೂ, ಮಗ ತನ್ನ ಹಟವನ್ನೇ ಹಿಡಿದರೆ, ತಮ್ಮ ಸಂಬಂಧ ಕಡಿದಂತೆ ಎಂದೂ ತಿಳಿಸಿದರು.

ಆಗ ತಮಗೆ ಇಷ್ಟವಿಲ್ಲದಿದ್ದರೂ ೧೮೭೩ ರ ಡಿಸೆಂಬರಿನಲ್ಲಿ ರಾನಡೆ ಎರಡನೆಯ ಬಾರಿ ಮದುವೆಯಾದರು. ತಂದೆಯ ಮಾತನ್ನು ಮೀರಬಾರದು, ಕುಟುಂಬದ ಶಾಂತಿಯನ್ನು ಹಾಳುಮಾಡಬಾರದು—ಈ ಎರಡು ತತ್ತ್ವಗಳನ್ನು ಮನಸ್ಸಿನಲ್ಲಿಟ್ಟು ತಂದೆಯ ಒತ್ತಾಯಕ್ಕಾಗಿ ರಾನಡೆ ಮದುವೆಯಾದರು. ಇದರಿಂದ ಪ್ರಪಂಚದ ನಿಂದೆಗೂ ಶತ್ರುಗಳ ಅಪಹಾಸ್ಯಕ್ಕೂ ಗುರಿಯಾದರು. ವಿಧವಾ ವಿವಾಹದ ವಿಷಯದಲ್ಲಿ ಮಿಥ್ಯಾಚಾರಿಯಾದ ಸುಧಾರಕನೆಂಬ ನಿಂದೆಗೆ ಒಳಗಾದರು. ಅವರ ನಡತೆಯನ್ನು ಕಂಡು ಸ್ನೇಹಿತರು ಆಶ್ಚರ್ಯಪಟ್ಟರು ಮತ್ತು ನೊಂದರು. ಆದರೆ ರಮಾಬಾಯಿ ರಾನಡೆ ತಮ್ಮ "ನೆನಪುಗಳು" ಎಂಬ ಗ್ರಂಥದಲ್ಲಿ "ಅನೇಕರ ಅಭಿಪ್ರಾಯದಲ್ಲಿ ಅವರನ್ನು ನಿಂದಿಸುವುದು ಸರಿಯೆಂದು ತೋರಿದರೂ, ಆಗಿನ ಅವರ ನಡತೆಯನ್ನು ಕಂಡು ನನಗೆ ಅವರಲ್ಲಿ ಬಹು ಗೌರವ ಉಂಟಾಯಿತು. ಅವರ ಜೀವನವನ್ನು ನಿಜವಾದ ಶ್ರದ್ಧೆಯಿಂದ ಗಮನಿಸುವವರೆಲ್ಲ ನನ್ನ ಅಭಿಪ್ರಾಯವನ್ನು ಅನುಮೋದಿಸುವರು" ಎಂದು ನುಡಿದಿದ್ದಾರೆ. ಈ ಸಂದರ್ಭದಲ್ಲಿ ರಾನಡೆಯವರ ಮನೋವ್ಯಥೆ ಎಷ್ಟು ದಾರುಣವಾಗಿತ್ತೆಂಬುದು ರಮಾಬಾಯಿ ರಾನಡೆಯವರ "ನೆನಪುಗಳಿ"ಂದ ತಿಳಿದು ಬರುತ್ತದೆ.

ರಾನಡೆ ಒಪ್ಪಿದ ಕೂಡಲೆ ಮದುವೆಯ ಏರ್ಪಾಡು ಆಯಿತು. ರಾನಡೆಯ ತಂದೆ ಮದುವೆಯನ್ನು ಬಹು ಆತುರಪಟ್ಟು ನಡೆಸಿದರು. ಹೆಣ್ಣಿನ ತಾಯಿಗೆ ಕೂಡ ಮದುವೆಯ ಸಮಯಕ್ಕೆ ಬರಲು ಸಾಧ್ಯವಾಗಲಿಲ್ಲ. ಮದುವೆ ಬಹು ಸರಳ ರೀತಿಯಲ್ಲಿ ನಡೆಯಬೇಕೆಂಬುದು ರಾನಡೆಯವರ ಇಷ್ಟವಾಗಿತ್ತು. ಬೆಳಗ್ಗೆ ರಾನಡೆ ಎಂದಿನಂತೆ ಕೋರ್ಟಿಗೆ ಹೋದರು, ಕೆಲಸ

ಮುಗಿಸಿಕೊಂಡು ಹಿಂದಿರುಗಿದರು. ಆಗ ಗೊತ್ತಾದ ವೇಳೆಯಲ್ಲಿ ಮದು ವೆಯ ಶುಭಕಾರ್ಯ ವೇದ ಮಂತ್ರಗಳೊಡನೆ ಮುಗಿಯಿತು. ಸಂಜೆ ರಮಾ ಬಾಯಿ ರಾನಡೆಯೊಡನೆ ಪತ್ನಿಯಾಗಿ ನಡೆದು ಪತಿಯ ಮನೆಯನ್ನು ಸೇರಿ ದರು. ರಾನಡೆಯವರಿಗೆ ಈ ವ್ಯಾಪಾರವೆಲ್ಲ ಸಂಕಟಮಯವಾಗಿತ್ತು. ಮದುವೆಯ ಸ್ಥಳದಿಂದ ಬಿಡುಗಡೆಯಾದ ಕೂಡಲೆ ಒಬ್ಬರೊಡನೆಯೂ ಮಾತಾಡದೆ ಏನನ್ನೂ ತಿನ್ನದೆ ತಮ್ಮ ಕೊಠಡಿಗೆ ಹೋಗಿ ಬಾಗಿಲು ಹಾಕಿಕೊಂಡರು. ಅವರ ಮನಸ್ಸು ಅಸಹ್ಯವಾದ ಹಿಂಸೆಗೆ ಗುರಿಯಾಗಿತ್ತು.

ಹೀಗೆ ಸಂಕಟಕರವಾದ ಸನ್ನಿವೇಶದಲ್ಲಿ ಆರಂಭವಾದ ಈ ಮದುವೆ ಯಿಂದ ಮುಂದೆ ಸುಖವಾದ ಕುಟುಂಬ ಜೀವನ ಆರಂಭವಾಗಲಿತ್ತು. ತಮ್ಮ ಒಳ್ಳೆಯ ಸ್ವಭಾವಕ್ಕನುಗುಣವಾಗಿ ರಾನಡೆ ಸಂಗತಿಗಳನ್ನು ಸುಗಮವಾಗಿ ಸಲು ತೊಡಗಿದರು. ಒಂದು ಸಂಜೆ ಹೆಂಡತಿಯನ್ನು ಕರೆದು—"ನಿನ್ನನ್ನು ನನಗೆ ಮದುವೆಮಾಡಿಕೊಟ್ಟಿದಾರೆ; ನಾನು ಯಾರು, ನನ್ನ ಹೆಸರೇನು, ಎಲ್ಲಾ ಗೊತ್ತೆ?" ಎಂದು ಕೇಳಿದರು. ಆಕೆ ತನಗೆ ಗೊತ್ತಿದ್ದನ್ನು ಹೇಳಿ ದರು. ಆಮೇಲೆ ಮನೆಯ ವಿಚಾರವನ್ನು ಕೇಳಿ ಓದು ಬರೆಯಲು ಬರು ತ್ತದೆಯೆ ಎಂದು ವಿಚಾರಿಸಿದರು. ಆಕೆಗೆ ಓದು ಬರಹ ಬಾರದು. ಆ ರಾತ್ರಿಯೇ ಹಲಗೆ ಬಳಪ ತರಿಸಿ ರಾನಡೆ ಆಕೆಗೆ ವರ್ಣಮಾಲೆಯ ಏಳು ಅಕ್ಷರಗಳನ್ನು ಹೇಳಿಕೊಟ್ಟರು. ಹಲಗೆಯನ್ನಾಗಲಿ ಅಕ್ಷರಗಳನ್ನಾಗಲಿ ಆಕೆ ಕಾಣದವರಾದ್ದರಿಂದ, ಅಕ್ಷರಗಳನ್ನು ಕಲಿಯಲು ಎರಡು ಗಂಟೆಗಳ ಕಾಲ ತೆಗೆದುಕೊಂಡರು. ರಾನಡೆ ಅಂದಿನಿಂದ ದಿನವೂ ಸಂಜೆ ಎರಡು ಗಂಟೆಗಳ ಕಾಲ ಪತ್ನಿಗೆ ಪಾಠಹೇಳುವ ಕೆಲಸವನ್ನು ಇಟ್ಟುಕೊಂಡರು. ವರ್ಣಮಾಲೆ ಯನ್ನು ಕಲಿಯಲು ಎರಡು ವಾರ ಹಿಡಿಯಿತು. ಆಮೇಲೆ ಬಾಲಬೋಧೆ ಯನ್ನು ಆರಂಭಿಸಲಾಯಿತು. ಮುಂದೆ ವ್ಯಾಕರಣ, ಗಣಿತ ಮೊದಲಾದ ವಿಷಯಗಳನ್ನು ಕ್ರಮವಾಗಿ ಬೋಧಿಸಿದರು. ಓದನ್ನು ವ್ಯವಸ್ಥಿತವಾಗಿ ಮುಂದುವರಿಸುವ ಸಲುವಾಗಿ ಸ್ತ್ರೀಯರ ಶಿಕ್ಷಣ ಕಾಲೇಜಿನ ಉಪಾಧ್ಯಾಯಿನಿ ಯೊಬ್ಬಳನ್ನು ಗೊತ್ತು ಮಾಡಿದರು. ೧೮೭೫ ರ ವೇಳೆಗೆ ಶ್ರೀಮತಿ ರಾನಡೆ ೫ನೆಯ ತರಗತಿಯ ಮಟ್ಟವನ್ನು ಮುಟ್ಟಿದ್ದರು. ಹೆಂಡತಿಯ ಶಿಕ್ಷಣ ವಿಷಯದಲ್ಲಿ ರಾನಡೆ ತೀವ್ರವಾದ ಆಸಕ್ತಿಯನ್ನು ವಹಿಸಿದರು. ಆಕೆಯ ಗುಣಶೀಲಗಳೂ ಉಪಕಾರ ಬುದ್ಧಿಯೂ ಪತಿಯ ಶ್ರಮವನ್ನು

ಸಾರ್ಥಕ ಮಾಡಿದವು. ಆಕೆ ಪತಿಗೆ ಬಹು ಹಿತವಂತಳೆನಿಸಿ ಒಂದು ಬೆಂಬಲವಾದರು. ಸ್ತ್ರೀಯರ ವಿಷಯದಲ್ಲಿ ಒಬ್ಬ ಮುಂದಾಳಾದರು. ಜಿ. ಕೆ. ದೇವಧರರ ಸಹಕಾರದಿಂದ ಪುಣೆಯಲ್ಲಿ 'ಸೇವಾಸದನ' ವನ್ನು ಸ್ಥಾಪಿಸಿ ಸಮಾಜ ಸುಧಾರಣೆಗಾಗಿ ಕೆಲಸ ಮಾಡಿದರು. ಮದುವೆಯಾದಾಗ ಆಕೆಗೆ ೧೧ ವರ್ಷ ವಯಸ್ಸು ಮಾತ್ರ. ಪತಿಯ ಮರಣಾನಂತರ ೨೩ ವರ್ಷಕಾಲ ಬದುಕಿದ್ದರು.

ರಾನಡೆ ಪುಣೆಗೆ ಬಂದವರು ಪ್ರಾರ್ಥನಾ ಸಮಾಜವನ್ನು ಸೇರಿದರು. ವಿ. ಎ. ಮೋಡಕ್ ಅದನ್ನು ೧೮೭೦ ರಲ್ಲಿ ಆರಂಭಿಸಿದ್ದರು. ಪ್ರಾರ್ಥನಾ ಸಮಾಜ ಒಂದು ಸುಧಾರಕ ಸಂಸ್ಥೆ. ಶತಮಾನಗಳ ಕಾಲ ಕೂಡಿಕೊಂಡಿದ್ದ ದೋಷಗಳನ್ನು ತೊಡೆದು ಹಾಕಿ ಹಿಂದು ಧರ್ಮವನ್ನು ಅದರ ಪುರಾತನ ವೈದಿಕ ಪಾವಿತ್ರ್ಯಕ್ಕೆ ಹಿಂದಿರುಗಿಸುವುದು ಸಮಾಜದ ಗುರಿಯಾಗಿತ್ತು. ಈ ದೋಷಗಳಲ್ಲಿ ಮುಖ್ಯವಾದುವು ವಿಗ್ರಹಾರಾಧನೆ, ಜಾತಿ ಭೇದ, ವಿಧವಾ ವಿವಾಹಕ್ಕೆ ನಿರೋಧ. ಈ ದೋಷಗಳನ್ನು ತೊಡೆದು ಹಾಕಲು ಶ್ರಮಿಸುತ್ತಿದ್ದ ಮಹಾಧರ್ಮ ನಾಯಕನೊಬ್ಬನು ೧೮೭೫ರಲ್ಲಿ ಪುಣೆಗೆ ಬಂದನು. ಆತನೆ ಸ್ವಾಮಿ ದಯಾನಂದ ಸರಸ್ವತೀ. ಆತನ ಮತಕ್ಕೂ ತಮ್ಮ ಮತಕ್ಕೂ ಭಿನ್ನಾಭಿಪ್ರಾಯಗಳಿದ್ದರೂ ರಾನಡೆ ದಯಾನಂದರನ್ನು ಗೌರವಿಸಿದರು, ಅವರ ತತ್ತ್ವಗಳ ಪ್ರಚಾರಕ್ಕೆ ಅವಕಾಶ ಮಾಡಿಕೊಟ್ಟರು. ಅವರ ಸಭೆಗಳಲ್ಲಿ ಹಾಜರಿದ್ದರು. ದಯಾನಂದರು ಪುಣೆಯಲ್ಲಿ ೧೫ ಭಾಷಣಗಳನ್ನು ಮಾಡಿದರು. ಆಗ ಎದ್ದ ತುಮುಲವನ್ನು ಗಮನಿಸಿದರೆ, ನಮ್ಮಲ್ಲಿ ಎಂಥ ವಿರೋಧದ ಮಧ್ಯೆ ಧಾರ್ಮಿಕ ಸುಧಾರಣೆಯನ್ನು ನಡಸಬೇಕಾಗುತ್ತದೆ ಎಂಬುದು ವ್ಯಕ್ತವಾಗುತ್ತದೆ.

ದಯಾನಂದರು ಪುಣೆಯನ್ನು ಬಿಡುವ ವೇಳೆಗೆ ಅವರ ಸನ್ಮಾನಾರ್ಥವಾಗಿ ಅವರನ್ನು ಸಭೆಗೆ ಆನೆಯ ಮೇಲೆ ಮೆರವಣಿಗೆಯಲ್ಲಿ ಕರೆದೊಯ್ಯಲು ವ್ಯವಸ್ಥೆಯಾಗಿತ್ತು. ಪ್ರತಿಪಕ್ಷದವರು ಮೆರವಣಿಗೆಯನ್ನು ಅವಮಾನಗೊಳಿಸಬೇಕೆಂದು ಯೋಚಿಸಿದರು. ಅವರು ಕತ್ತೆಯೊಂದಕ್ಕೆ ಕಾವಿ ರುಮಾಲನ್ನು ಸುತ್ತಿ ಜರಿಯ ಶಾಲನ್ನು ಹೊದಿಸಿ ಗಾರ್ದಭಾನಂದ ಸ್ವಾಮಿಯೆಂದು ಕರೆದು ಅದನ್ನು ಮೆರವಣಿಗೆ ಹೊರಡಿಸಲು ಏರ್ಪಾಟು ಮಾಡಿದರು. ಸ್ವಾಮಿಯವರ ಕಡೆಯವರು ಗಲಭೆಯಾಗಬಹುದೆಂದು ಭಯಪಟ್ಟು ಮೆರ

ವಣಿಗೆಯನ್ನು ನಿಲ್ಲಿಸಬೇಕೆಂದು ಇಷ್ಟಪಟ್ಟರು. ರಾನಡೆ ಅದನ್ನು ವಿರೋಧಿಸಿದರು. ಮೆರವಣಿಗೆಯನ್ನು ಧೈರ್ಯವಾಗಿ ನಡಸುವುದರಿಂದ ಪುಣೆಯಲ್ಲಿ ಎಷ್ಟು ಜನ ನಿಜವಾಗಿ ಸಮಾಜ ಸುಧಾರಣೆಯನ್ನು ಅನುಸರಿಸಲು ತಯಾರಿರುವರೆಂಬುದು ವ್ಯಕ್ತವಾಗುತ್ತದೆಯೆಂದರು. ಪ್ರತಿಯೊಂದು ಸುಧಾರಣಾ ಚಳವಳಿಯೂ ಹಿಂಸಕರ ಬೆಂಕಿಯಲ್ಲಿ ಸತ್ತ್ವ ಪರೀಕ್ಷೆ ಹೊಂದಬೇಕೆಂಬುದನ್ನು ಮರೆಯಬೇಡಿರೆಂದು ಸ್ನೇಹಿತರನ್ನು ಎಚ್ಚರಿಸಿದರು.

ಮರುದಿವಸ ಮೆರವಣಿಗೆಯೇನೋ ಶಾಂತವಾಗಿ ನಡೆಯಿತು. ಆದರೆ ಸತ್ಕಾರ ಸಭೆ ನಡೆಯುತ್ತಿದ್ದಾಗ ಗಲಭೆಯಾಯಿತು. ಸಿಟಿ ಮ್ಯಾಜಿಸ್ಟ್ರೇಟರು ಬಂದು ಸ್ವಾಮಿಯವರನ್ನು ಅವರ ನಿವಾಸ ಸ್ಥಾನಕ್ಕೆ ಸುಖವಾಗಿ ತಲಪಿಸಿದರು. ರಾನಡೆ ಮನೆಗೆ ಹಿಂದಿರುಗುವ ವೇಳೆಗೆ ಅವರ ಬಟ್ಟೆಯೆಲ್ಲ ಮಣ್ಣಿನಿಂದ ಮುಚ್ಚಿತ್ತು. ಗಲಭೆಗೆ ಪ್ರೇರಕರು ಯಾರೆಂಬ ವಿಚಾರದಲ್ಲಿ ಸಂಪೂರ್ಣವಾದ ರುಜುವಾತು ರಾನಡೆಯವರ ವಶದಲ್ಲಿತ್ತು. ಅವರಿಗೂ ಅದು ತಿಳಿದಿದ್ದುದರಿಂದ ರಾನಡೆಗೆ ಶರಣಾದರು. ರಾನಡೆ ಅವರನ್ನು ಶಿಕ್ಷೆಗೆ ಗುರಿಪಡಿಸಲು ಒಪ್ಪಲಿಲ್ಲ: "ಶರಣಾದ ಮನುಷ್ಯನನ್ನು ಕೊಲ್ಲಲು ಯೋಚಿಸಲೂ ಬಾರದು" ಎಂಬ ತುಕಾರಾಮನ ಪದವನ್ನು ಉದ್ಧರಿಸಿದರು.

ಅದೇ ವರ್ಷ ಮನೆಯಲ್ಲಿ ತಂದೆ ಮಕ್ಕಳ ಮಧ್ಯೆ ಮನಸ್ತಾಪವುಂಟಾಗಿ ಕಷ್ಟದಿಂದ ಸೌಹಾರ್ದವನ್ನು ಕಾಪಾಡಬೇಕಾಯಿತು. ವಿಧವೆಯೊಬ್ಬಳನ್ನು ಮದುವೆಯಾಗಿದ್ದ ವಿಷ್ಣುಶಾಸ್ತ್ರೀ ಪಂಡಿತ್ ಎಂಬ ಸಮಾಜ ಸುಧಾರಕರು ಪುಣೆಯ ಮಾರ್ಗವಾಗಿ ಮಹಾಬಲೇಶ್ವರಕ್ಕೆ ಹೋಗುತ್ತಿದ್ದರು. ರಾನಡೆ ಅವರನ್ನು ತಮ್ಮ ಮನೆಗೆ ಊಟಕ್ಕೆ ಕರೆದರು. ರಾನಡೆಯ ತಂದೆಗೆ ಈ ವಿಚಾರ ತಿಳಿಯುತ್ತಲೆ ಅವರು ಸಿಟ್ಟುಗೊಂಡು ಸಂಜೆಯೆಲ್ಲ ಮನೆಯಲ್ಲಿರದೆ, ಮರುದಿನ ಮನೆಬಿಟ್ಟು ಹೊರಡಲು ಸಿದ್ಧತೆಗಳನ್ನು ಮಾಡಿಕೊಂಡರು. ಸೋದರಿ ದುರ್ಗಾ ಈ ವಿಚಾರವನ್ನು ತಿಳಿಸಿಲು, ತಂದೆಯ ಹಟದ ಸ್ವಭಾವವನ್ನು ಅರಿತ ರಾನಡೆಗೆ ರಾತ್ರಿಯೆಲ್ಲ ನಿದ್ದೆ ಬರಲಿಲ್ಲ. ಬೆಳಗ್ಗೆ ಮುಂಚಿತವಾಗಿ ಎದ್ದು ತಂದೆಯ ಕೊಟಡಿಯ ಬಾಗಿಲ ಮುಂದೆ ನಿಂತರು. ಆಮೇಲೆ ನಡೆದ ಮಾತುಕತೆಗಳಲ್ಲಿ, ತಂದೆಯು ಮನೆ ಬಿಟ್ಟು ಕರವೀರಕ್ಕೆ ಹೋದಲ್ಲಿ—ತಾವೂ ಹಿಂಬಾಲಿಸುವುದಾಗಿ ತಿಳಿಸಿದರು. ಆದರೆ ತಂದೆ ಜಗ್ಗಲಿಲ್ಲ. ಒಂಭತ್ತು ಗಂಟೆಯ ವೇಳೆಗೆ ಗಾಡಿಗಳು ಸಿದ್ಧವಾದುವು. ತಂದೆ

ಹೊರಡುವುದೇ ನಿಶ್ಚಯವೆಂದು ತಿಳಿದು ರಾನಡೆ—ತಾಯಿ ತೀರಿದ ದಿನವೇ ತಾವು ಅನಾಥನಾದೆನೆಂದು ತಿಳಿಸಿ—ಅಲ್ಲಿಂದ ಹೊರಟು ಹೋದರು. ಸ್ವಲ್ಪ ಹೊತ್ತಿನಲ್ಲಿ ಜವಾನನ ಸಂಗಡ ಒಂದು ಚೀಟಿಯನ್ನು ಕಳಿಸಿದರು. ಅದರಲ್ಲಿ "ಕೊಲ್ಹಾಪುರಕ್ಕೆ ಹೋಗುವ ನಿಮ್ಮ ನಿರ್ಧಾರವನ್ನು ತೊರೆಯದಿದ್ದರೆ, ನಾನು ಸರ್ಕಾರಕ್ಕೆ ನನ್ನ ರಾಜಿನಾಮೆಯನ್ನು ಕಳಿಸಿ ಕೊಡುತ್ತೇನೆ." ಎಂದು ಬರೆದಿದ್ದರು. ಅದರಿಂದ ಇಚ್ಛಿತ ಪರಿಣಾಮ ಉಂಟಾಯಿತು. ಪ್ರಯಾಣ ನಿಂತಿತು. ತಿರುಗಿ ಈ ಬಗೆಯ ಸಂಗತಿ ನಡೆಯಲು ರಾನಡೆ ಅವಕಾಶ ಕೊಡಲಿಲ್ಲ.

ಇದಾದ ಸುಮಾರು ಎರಡು ವರ್ಷಗಳ ಮೇಲೆ—೧೮೭೭ ರ ಫೆಬ್ರುವರಿಯಲ್ಲಿ—ತಂದೆ ತೀರಿಹೋದರು. ತಂದೆ ಒದಗಿಸಿದ ಉದಾರವಾದ ಶಿಕ್ಷಣ ರಾನಡೆಯವರ ಜಯಕ್ಕೆ ಕಾರಣವಾಗಿತ್ತು. ತಮಗೆ ಬರುವ ಅಲ್ಪ ವರಮಾನದಲ್ಲಿ ತಂದೆ ಮಗನನ್ನು ಬೊಂಬಾಯಿಯಲ್ಲಿ ಓದಿಸಿದ್ದರು. ರಾನಡೆ ಅದಕ್ಕಾಗಿ ಕೃತಜ್ಞರಾಗಿದ್ದರು. ತಂದೆಗೆ ವಿಧೇಯರಾಗಿದ್ದರು. ತಂದೆಯ ಕೆಲವು ಸಾಲಗಳನ್ನು ಒಮ್ಮೆ ತೀರಿಸಿದರು. ತಂದೆಯ ಅಲ್ಪ ಪೆನ್ಷನ್ನಿಗೆ ಹಣವನ್ನು ಸೇರಿಸಿಕೊಡುತ್ತಿದ್ದರು. ಅವರು ಕೊನೆಯಲ್ಲಿ ಕಾಯಿಲೆ ಮಲಗಿದಾಗ ಅವರನ್ನು ಪ್ರೀತಿಯಿಂದ ನೋಡಿಕೊಂಡರು, ಅತ್ಯುತ್ತಮವಾದ ವೈದ್ಯ ಸಹಾಯವನ್ನು ಒದಗಿಸಿದರು, ಮತ್ತು ಅವರ ಬಳಿಯಲ್ಲೇ ಇರುವುದಕ್ಕಾಗಿ ಎರಡು ಬಾರಿ ದೀರ್ಘಾವಧಿ ರಜವನ್ನು ತೆಗೆದುಕೊಂಡರು. ಒಂದು ಬಾರಿ ತಂದೆಯನ್ನು ಕೆಲವು ದಿನ ಬಿಟ್ಟುಹೋಗಬೇಕಾಗಿ ಬಂದಾಗ ಆತನು "ನನ್ನನ್ನು ಬಿಟ್ಟುಹೋಗಬೇಡ" ಎಂದು ಮಗುವಿನಂತೆ ಅತ್ತರು.

ರಾನಡೆಯವರ ಮತ್ತು ಸಾರ್ವಜನಿಕ ಸಭಾದ ಪ್ರಭಾವದಿಂದ ಪುಣೆಯಲ್ಲಿ ರಾಜಕೀಯ ಜಾಗೃತಿ ತಲೆದೋರುತ್ತಿತ್ತು. ಪೇಶ್ವೆಗಳು ನಾಶವಾದಂದಿನಿಂದ ಪುಣೆಯಲ್ಲಿ ಜನ ನಿದ್ದೆಯಲ್ಲಿ ಮುಳುಗಿದ್ದರು. ಈಗ ಎಚ್ಚತ್ತುಕೊಳ್ಳಲಾರಂಭಿಸಿದ್ದರು. ಸ್ವದೇಶಿ ವಸ್ತುಗಳನ್ನು ಮಾರಾಟ ಮಾಡುವುದಕ್ಕಾಗಿ ಹೊಸ ಅಂಗಡಿಗಳು ತೆರೆದವು. ವಿದೇಶೀ ವಸ್ತುಗಳ ಮಾರಾಟವನ್ನು ಕಡಮೆ ಮಾಡಬೇಕೆಂಬ ಇಚ್ಛೆ ಜನರ ಮನಸ್ಸಿನಲ್ಲಿ ಬೇರೂರಿತ್ತು. ಸಾರ್ವಜನಿಕ ಸಭಾದ ಚಟುವಟಿಕೆಗಳಿಂದ ಇಡೀ ಮಹಾರಾಷ್ಟ್ರವೇ ಚೈತನ್ಯಗೊಳ್ಳುತ್ತಿತ್ತು. ಇತರ ಪ್ರಾಂತಗಳಿಗೂ ಅದು ಮಾದರಿಯಾಗುತ್ತಿತ್ತು.

ಪ್ರಾರ್ಥನಾ ಸಮಾಜದ ಮೂಲಕ ಮತ ವಿಚಾರಗಳಲ್ಲಿ ಶೋಧನೆ ನಡೆಯುತ್ತಿತ್ತು. ಪುಸ್ತಕ ಭಂಡಾರಗಳನ್ನು ಉಪಯೋಗಿಸುವ ಆಸಕ್ತಿ ಜನರಲ್ಲಿ ಬೆಳೆಯುತ್ತಿತ್ತು. ವಿವಿಧ ವಿಷಯಗಳನ್ನು ಕುರಿತು ವಿದ್ವಾಂಸರು ಭಾಷಣ ಮಾಡಲಾರಂಭಿಸಿದರು. ಯುವಕರು ಚರ್ಚೆಗಳಲ್ಲಿ ಭಾಗವಹಿಸಲು ಹಾತೊರೆದರು. ಗೃಹ ಕೈಗಾರಿಕಾ ಕೇಂದ್ರಗಳೂ ವ್ಯಾಯಾಮ ಶಾಲೆಗಳೂ ರೂಪುಗೊಂಡವು, ರಾನಡೆಯ ಪ್ರಭಾವದಿಂದ ಪುಣೆ ನವಚೈತನ್ಯದಿಂದ ಕೂಡಿತು.

೧೮೭೭ ರ ಮೇನಲ್ಲಿ ಸರ್ ರಿಚರ್ಡ್ ಟೆಂಪಲ್ ಎಂಬಾತನು ಬೊಂಬಾಯಿ ಗವರ್ನರಾಗಿ ಬಂದನು. ರಾಜಕೀಯ ಕ್ಷೇತ್ರದಲ್ಲಿ ನಡೆಯುತ್ತಿದ್ದ ವ್ಯಾಪಾರಗಳನ್ನು ಕಂಡು ಆತನು ಭಯಗೊಂಡನಂತೆ. ಎಲ್ಲ ಚಟುವಟಿಕೆಗಳಿಗೆ ರಾನಡೆಯೇ ಮೂಲವೆಂಬುದು ತಿಳಿಯಿತು. ಸಬಾರ್ಡಿನೇಟ್ ಜಡ್ಜಿಗಳು ಒಂದೇ ಸ್ಥಳದಲ್ಲಿ ಐದು ವರ್ಷಗಳಿಗೆ ಮೇಲ್ಪಟ್ಟು ಇರಬಾರದೆಂಬ ನಿಯಮವನ್ನು ಜಾರಿಗೆ ತಂದು ರಾನಡೆಯನ್ನು ಕೂಡಲೆ ನಾಸಿಕಕ್ಕೆ ವರ್ಗಾಯಿಸಲಾಯಿತು.

೧೮೭೮ ರ ಜನವರಿಯಲ್ಲಿ ರಾನಡೆ ನಾಸಿಕಕ್ಕೆ ಹೋದರು. ಆದರೆ ಫೆಬ್ರುವರಿಯಲ್ಲಿ ರಜ ಪಡೆದು ಪುಣೆಗೆ ಬಂದರು. ಅಲ್ಲಿ ಜೋರಾಗಿ ಕಾಯಿಲೆ ಬಿದ್ದರು ; ಸ್ನೇಹಿತರು ಅವರ ಆರೋಗ್ಯ ವಿಚಾರದಲ್ಲಿ ಆತಂಕಪಟ್ಟರು. ರಾನಡೆ ಮಾತ್ರ ಶಾಂತಚಿತ್ತರಾಗಿದ್ದರು. ಔಷಧವನ್ನು ಸೇವಿಸಿ ರೋಗದೊಡನೆ ಹೋರಾಡುವ ಕಾರ್ಯವನ್ನು ದೇಹಕ್ಕೆ ಬಿಟ್ಟು, ದೇವರ ಧ್ಯಾನದಲ್ಲಿ ಮನಸ್ಸನ್ನು ಹರಿಸಿದರು.

ರಾನಡೆ ಗುಣಹೊಂದಿದ್ದನ್ನು ಕಂಡು ಸರ್ವರಿಗೂ ಸಂತೋಷವಾಯಿತು. ನಾಸಿಕಕ್ಕೆ ಹಿಂದಿರುಗಿದ ಮೇಲೆ ನಾನಾ ಚಟುವಟಿಕೆಗಳಲ್ಲಿ ತೊಡಗಿದರು. ದೇಶಮುಖ್‌ರ ಜೊತೆಗೆ ಸೇರಿ ಮರಾಠೀ ಸಾಹಿತ್ಯದ ಬೆಳವಣಿಗೆಗಾಗಿ ಒಂದು ಸಂಘವನ್ನು ಸ್ಥಾಪಿಸಿದರು. ಬೇಸಗೆಯ ರಜಕ್ಕೆ ಪುಣೆಗೆ ಬಂದಾಗ ದೇಶೀಯ ಪತ್ರಿಕೆಗಳ ವಿಷಯದಲ್ಲಿ ಸರಕಾರ ವಿರೋಧ ಭಾವವನ್ನು ಬಿಡಬೇಕೆಂದು ಒತ್ತಾಯಪಡಿಸುವ ಅರ್ಜಿಯೊಂದನ್ನು ಪುರಜನರ ಸಭೆಯ ಪರವಾಗಿ ವೈಸರಾಯರಿಗೆ ಕಳಿಸುವ ಸಲುವಾಗಿ ತಯಾರಿಸಿದರು. ನಾಸಿಕಕ್ಕೆ ಹಿಂದಿರುಗಿದವರು ಅಲ್ಲಿ ಸಾರ್ವಜನಿಕ ಪುಸ್ತಕ ಭಂಡಾರವನ್ನು ಸ್ಥಾಪಿಸಿದರು ; ಪುರಭವನವನ್ನು ಕಟ್ಟಲು ಜನರಲ್ಲಿ ಆಸಕ್ತಿ ಹುಟ್ಟಿಸಿದರು ;

ಪ್ರಾರ್ಥನಾ ಸಮಾಜದ ಶಾಖೆಯನ್ನು ತೆರೆಯಲು ಯೋಜನೆಯನ್ನು ಹಾಕಿದರು.

೧೮೭೯ ರ ಏಪ್ರಿಲ್‌ನಲ್ಲಿ ಫಡಕೆ ದೊಂಬಿ ಎಂಬ ತೊಂದರೆ ಎದ್ದಿತು. ದೊಂಬಿಕಾರನೊಂದಿಗೆ ರಾನಡೆಗೆ ನಿಕಟ ಸಂಬಂಧವಿದೆಯೆಂದೂ ಪುಣೆಯಲ್ಲಿ ಎರಡು ಸರಕಾರಿ ಕಟ್ಟಡಗಳು ಸುಟ್ಟಿದ್ದರಲ್ಲಿ ಅವರ ಕೈವಾಡವಿದೆಯೆಂದೂ ಇತ್ಯಾದಿಯಾಗಿ ಸರಕಾರ ರಾನಡೆಯವರಲ್ಲಿ ಸಂಶಯ ಪಟ್ಟಿತು.

ಸಂಶಯಕ್ಕೆ ಆಧಾರವಿರಲಿಲ್ಲ. ಆದರೆ ರಾನಡೆ ರಾಷ್ಟ್ರೀಯ ಜಾಗೃತಿಯ ಮುಂದಾಳಾಗಿದ್ದುದರಿಂದ ಎರಡು ಚಳವಳಿಗಳಿಗೂ ಸರಕಾರ ಸಂಬಂಧ ಕಲ್ಪಿಸಿ ಮುಖ್ಯವಾಗಿ ರಾನಡೆಯವರ ಮೇಲೆ ಸಂಶಯಪಟ್ಟಿತು.

ಫಡಕೆ ೧೮೪೫ರಲ್ಲಿ ಹುಟ್ಟಿ ಡಾಕ್ಟರಾಗುವ ಇಚ್ಛೆಯಿಂದ ಓದಿ ಅದನ್ನು ಬಿಟ್ಟು ಸರಕಾರಿ ಉದ್ಯೋಗಕ್ಕೆ ಸೇರಿದ್ದನು. ಬ್ರಿಟಿಷ್ ಆಡಳಿತದಿಂದ ದೇಶವನ್ನು ಬಿಡುಗಡೆ ಮಾಡಬೇಕೆಂಬ ಇಚ್ಛೆ ಅವನಲ್ಲಿ ಪ್ರಬಲವಾಗಿತ್ತು. ವಿದೇಶೀ ಪ್ರಭುತ್ವದ ಮೇಲೆ ದ್ವೇಷ ಹೆಚ್ಚಲು ಒಂದು ಕಾರಣ ಒದಗಿತು. ಕಾಯಿಲೆಯಾದ ಬಂಧುವೊಬ್ಬನನ್ನು ನೋಡಿಕೊಂಡು ಬರುವ ಉದ್ದಿಶ್ಯ ರಜಾಕ್ಕೆ ಹಾಕಿದನು. ತೀರ ಕೈವಿಾರಿ ಹೋಗುವವರೆಗೆ ರಜ ದೊರೆಯಲಿಲ್ಲ. ಆಗ ಹತಾಶನಾಗಿ ಉದ್ಯೋಗವನ್ನು ತೊರೆದು ಜನರನ್ನು ಜಾಗೃತಗೊಳಿಸುವ ಕಾರ್ಯದಲ್ಲಿ ನಿರತನಾದನು. ಅನೇಕ ಸ್ಥಳಗಳಿಗೆ ಹೋಗಿ ಭಾಷಣ ಮಾಡಿದನು. ಆ ರೀತಿಯ ಕಾರ್ಯಕ್ರಮದಿಂದ ಉಪಯೋಗವಿಲ್ಲವೆಂದು ಹಿಂಸಾಮಾರ್ಗವನ್ನು ತುಳಿದನು. ಸಿಪಾಯಿ ದಂಗೆಯ ನೆನಪು ಜನರ ಮನಸ್ಸಿನಲ್ಲಿ ಇನ್ನೂ ಉಳಿದಿತ್ತು; ಬ್ರಿಟಿಷರನ್ನು ಬಲದಿಂದ ಓಡಿಸುವ ಪ್ರಯತ್ನದಲ್ಲಿ ವಿದ್ಯಾವಂತರು ಸೇರುವುದು ಕಷ್ಟವಾಗಿ ತೋರಿತು. ಆದ್ದರಿಂದ ಫಡಕೆ ಅನಕ್ಷರಸ್ಥರಾದ ಗ್ರಾಮಸ್ಥರನ್ನು ಆಶ್ರಯಿಸಿದನು. ಸ್ವಲ್ಪ ಕಾಲದಲ್ಲಿಯೆ ಪುಣೆ ಜಿಲ್ಲೆಯಲ್ಲಿ "ಫಡಕೆ ದಂಗೆ" ಎಂಬ ಮಾತು ಎಲ್ಲೆಡೆಯಲ್ಲೂ ಕೇಳಬಂತು.

೧೮೭೯ರ ಮೇ ೧೩ ರ ರಾತ್ರಿ ಪುಣೆಯಲ್ಲಿ ಬುಧವಾರ್–ಅರಮನೆಗೆ ಬೆಂಕಿ ಬಿದ್ದಿದೆಯೆಂಬ ಕೂಗೆದ್ದಿತು. ಅಗ್ನಿದಳದವರೂ ಮಿಲಿಟರಿಯವರೂ ನಾಗರಿಕರೂ ಸೇರಿ ಅಗ್ನಿಯನ್ನು ಆರಿಸಿದರು. ಅಷ್ಟು ಹೊತ್ತಿಗೆ ವಿಶ್ರಾಮಬಾಗ್ ಅರಮನೆಗೂ ಬೆಂಕಿ ಹೊತ್ತಿದೆಯೆಂದು ಸುದ್ದಿ ಬಂತು. ಈ ಎರಡು

ಕಟ್ಟಡಗಳೂ ಪೇಷ್ವೆಯವರಿಗೆ ಸಂಬಂಧಪಟ್ಟ ಚಾರಿತ್ರಿಕ ಸ್ಥಳಗಳು. ಅವು ಬೆಂಕಿಯ ಪಾಲಾಗುವುದು ಪುಣೆಯ ಜನರಿಗೆ ಬಹು ದುಃಖದ ವಿಷಯ. ವಿಶ್ರಾಮಬಾಗಿನ ಬಹುಭಾಗವನ್ನು ಬೆಂಕಿಯಿಂದ ಕಾಪಾಡಿದರು.

ಸರಕಾರ ಫಡಕೆಯ ದಂಗೆಗೂ ಈ ಬೆಂಕಿಗೂ ಸಂಬಂಧವನ್ನು ಕಲ್ಪಿಸಿತು. ಪುಣೆಯ ನಾಗರಿಕರು ಸರಕಾರವನ್ನು ಉರುಳಿಸುವುದಕ್ಕಾಗಿ ಪಿತೂರಿಯನ್ನು ಹೂಡಿರುವುದಾಗಿ ಸರಕಾರ ಭಾವಿಸಿತು. ಆಂಗ್ಲೋ ಇಂಡಿಯನ್ ಪತ್ರಿಕೆಗಳು ಸರಕಾರದ ಸಂಶಯದ ಬೆಂಕಿಗೆ ಗಾಳಿ ಹಾಕಿದವು.

ರಾನಡೆ ಪತ್ರಿಕೆಗಳ ತೀಕ್ಷ್ಣವಾದ ಆಘಾತಕ್ಕೆ ಒಳಗಾದರು. ಅವರ ಸುತ್ತ ಸಂಶಯದ ಮೋಡ ಕವಿದಿತ್ತು. ಅವರು ಮಾತ್ರ ಎಂದಿನಂತೆ ತಮ್ಮ ಕೆಲಸದಲ್ಲಿ ಶಾಂತರಾಗಿ ನಿರತರಾಗಿದ್ದರು. ಆದರೆ ಗಲಭೆಗಳ ಮೂಲವನ್ನು ಕಂಡುಹಿಡಿಯಬೇಕೆಂದು ನಿರ್ಧರಿಸಿದರು. ರಾನಡೆ ಎಂಬ ಹೆಸರುಳ್ಳ ಸರಕಾರಿ ನೌಕರನೊಬ್ಬನು ಬೆಂಕಿಗೆ ಕಾರಣನೆಂದು ತಿಳಿಯಿತು. ಪೋಲೀಸರ ಕೈಗೆ ಸಿಕ್ಕೊಡನೆ ಅವನು ತನ್ನ ತಪ್ಪನ್ನು ಒಪ್ಪಿಕೊಂಡನು. ಅವನು ಸರಕಾರದ ಹಣವನ್ನು ದುರುಪಯೋಗಪಡಿಸಿಕೊಂಡಿದ್ದನು. ಆ ತಪ್ಪನ್ನು ಮುಚ್ಚುವುದಕ್ಕಾಗಿ ರಿಕಾರ್ಡುಗಳನ್ನು ಹಾಳುಮಾಡಲು ಬೆಂಕಿಯಿಟ್ಟಿದ್ದನು.

ಸರಕಾರ ತನ್ನ ಅಸಮಾಧಾನವನ್ನು ಸೂಚಿಸುವುದಕ್ಕಾಗಿ ಬೆಂಕಿಯ ಅವಾಂತರ ನಡೆದ ಒಂದು ವಾರದೊಳಗಾಗಿ—ರಾನಡೆಯವರನ್ನು ಧುಲಿಯ ಎಂಬ ಸ್ಥಳಕ್ಕೆ ವರ್ಗಾಯಿಸಿದರು. ಅಲ್ಲಿ ರಾನಡೆಯವರಿಗೆ ಅವರ ಕಾಗದಗಳು ಸಕಾಲಕ್ಕೆ ಬರುತ್ತಿರಲಿಲ್ಲ, ಅಲ್ಲದೆ ಕೆಲವು ಕಾಗದಗಳನ್ನು ಒಡೆದು ಪುನಃ ಅಂಟಿಸಿರುವುದು ಕಂಡುಬರುತ್ತಿತ್ತು. ಈ ರೀತಿ ಎರಡು ತಿಂಗಳ ಕಾಲ ನಡೆದ ಮೇಲೆ ಅಸಿಸ್ಟೆಂಟ್ ಕಲೆಕ್ಟರ್ ರಾನಡೆಯನ್ನು ಕಂಡು ಕಾಗದ ಪತ್ರಗಳ ತನಿಖೆಗಾಗಿ ವಿಷಾದ ವ್ಯಕ್ತಪಡಿಸಿದರು.

ಸುಮಾರು ಈ ವೇಳೆಗೆ—ಜುಲೈ ತಿಂಗಳ ಕೊನೆಗೆ—ಫಡಕೆಯನ್ನು ಹಿಡಿದರು. ಅವನ ವಿಚಾರಣೆಯಿಂದ ರಾನಡೆಗೂ ಡಕಾಯಿತರಿಗೂ ಯಾವ ಸಂಬಂಧವೂ ಇಲ್ಲವೆಂದು ವ್ಯಕ್ತಪಟ್ಟಿತು. ಫಡಕೆಗೆ ಜೀವಾವಧಿ ಸೆರೆಯಾಗಿ ಆತನು ಏಡನ್ನಿನಲ್ಲಿ ನಾಲ್ಕು ವರುಷಗಳ ತರುವಾಯ ಮರಣಹೊಂದಿದನು.

ರಾನಡೆ ಫಡಕೆಯ ಮಾರ್ಗವನ್ನು ಖಂಡಿತವಾಗಿಯೂ ಒಪ್ಪಿದವರಲ್ಲ. ಅವರಿಗೆ ಅದರ ವಿಷಯದಲ್ಲಿ ಬೇಸರ. ಆದರೆ ಅವರ ಅಭಿಪ್ರಾಯದಲ್ಲಿ,

ಪ್ರಾಯಶಃ—ಸ್ವಂತ ಉದ್ಧಾರದ ಅವಕಾಶಗಳನ್ನೆಲ್ಲ ನಿರಾಕರಿಸಿ ತನ್ನನ್ನೂ ತನ್ನ ಕುಟುಂಬವನ್ನೂ ದಾರಿದ್ರ್ಯಕ್ಕೆ ಗುರಿಮಾಡಿದ, ಸ್ವಾರ್ಥರಹಿತವಾದ ಅವನ ದೇಶಾಭಿಮಾನ ಪ್ರಶಾಂಸರ್ಹವಾದದ್ದು—ಎಂದಿರಬೇಕು:

ರಾಜದ್ರೋಹ ಚಳವಳಿಗೂ ರಾನಡೆಗೂ ಸಂಬಂಧವಿಲ್ಲವೆಂದು ಈವೇಳೆಗೆ ಸ್ಪಷ್ಟವಾಗಿತ್ತು. ಅಲ್ಲದೆ ಸರ್ ರಿಚರ್ಡ್ ಟೆಂಪಲ್ ಇಂಗ್ಲೆಂಡಿಗೆ ಹಿಂದಿರುಗಿದ್ದನು. ರಾನಡೆಯ ವಿಷಯದಲ್ಲಿ ಸಂಶಯ ನಿವಾರಣೆಯಾಗಿತ್ತು. ಆದ್ದರಿಂದ ಅವರನ್ನು ಬೊಂಬಾಯಿಯ ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟಾಗಿ ನೇಮಕ ಮಾಡಿದರು (೧೮೮೧). ಇದುವರೆಗೆ ರಾನಡೆ ಸಿವಿಲ್ ಲಾ ಆಡಳಿತದಲ್ಲಿ ಹೆಸರು ಗಳಿಸಿದ್ದರು. ಈಗ ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟಾಗಿ ಕ್ರಿಮಿನಲ್ ಕಾನೂನನ್ನು ವ್ಯವಹರಿಸಬೇಕಾಗಿತ್ತು. ಕ್ರಿಮಿನಲ್ ಕಾನೂನಿನಲ್ಲಿಯೂ ನಿಷ್ಣಾತರೆಂದು ಶೀಘ್ರವಾಗಿಯೆ ತೋರಿಸಿಕೊಂಡರು.

ರಾನಡೆ ಬೊಂಬಾಯಿಗೆ ಬಂದದ್ದರಿಂದ ಪ್ರಾರ್ಥನಾ ಸಮಾಜದ ಶಾಖೆಯಾದ ಸಂಗನು ಸಭಾಕ್ಕೆ ಹೊಸ ಜೀವ ಬಂತು. ಸಭೆಯ ಹಲವು ಸುಧಾರಕರ ಅತ್ಯುತ್ಸಾಹವನ್ನು ಅವರು ಮಿತಗೊಳಿಸಿದರು. ತಂದೆತಾಯಿಗಳ ಮನಸ್ಸು ನೋಯುತ್ತದೆಯೆಂದು ಸುಧಾರಣೆಗಳನ್ನು ತಡೆಯಬಾರದೆಂದು ಉತ್ಸಾಹಿಗಳು ಹೇಳುತ್ತಿದ್ದರು. ಆದರೆ ರಾನಡೆ ನುಡಿದರು:

"ನಮಗೆ ನಿಜವೆಂದು ತೋರಿದ ಯಾವುದೋ ವಿಷಯಕ್ಕೆ ಗಟ್ಟಿಯಾಗಿ ಅಂಟಿಕೊಂಡು ತಂದೆ ತಾಯಿಗಳ ಮನಸ್ಸಿಗೆ ನೋವನ್ನುಂಟುಮಾಡುವುದು ಸರಿಯಲ್ಲ. ರಾಜನ ಕಾನೂನು ಅನ್ಯಾಯವಾಗಿದ್ದರೆ ನೂರಾರು ಜನರಿಗೆ ತೊಂದರೆಯಾಗಿ ಕೇಡು ಉಂಟಾಗುತ್ತದೆ. ಆದರೆ ಸತ್ಯಾಂಶವನ್ನು ತಿಳಿದ ಯಾರಾದರೊಬ್ಬರು ಕೂಡಲೆ ಕಾನೂನನ್ನು ಮುರಿಯ ಹೊರಡುವುದು ವ್ಯರ್ಥ. ಕಾನೂನಿನ ವಿಚಾರವಾಗಿ ಇರುವ ತನ್ನ ಅಭಿಪ್ರಾಯವನ್ನು ಇತರರ ಮನಸ್ಸಿಗೂ ತಿಳಿಯುವಂತೆ ಮಾಡುವುದು ಅವನ ಕರ್ತವ್ಯ. ಆಮೇಲೆ, ಕೆಲವು ಕಾಲದ ಮೇಲೆ, ಪ್ರತಿಯೊಬ್ಬರ ತಿಳಿವಳಿಕೆಯೂ ಇವನದರಂತೆ ಆದಾಗ, ಕಾನೂನು ಬದಲಾವಣೆಯಾಗುತ್ತದೆ. ಮನೆಗೆ ಸಂಬಂಧಪಟ್ಟ ವಿಷಯವೂ ಇದೇ ರೀತಿಯೇ. ಹಣೆಗೆ ಕುಂಕುಮವನ್ನೂ ಕೈಗೆ ಬಳೆಗಳನ್ನೂ ಇಡುವುದರಿಂದ ನಿಜವಾದ ಪ್ರಯೋಜನವೇನೂ ಇಲ್ಲ. ಆದರೆ ಹಾಗೆಂದು ನಾವು ಕುಂಕುಮವನ್ನು ಅಳಿಸಬಾರದು, ಬಳೆಗಳನ್ನು ಒಡೆಯಬಾರದು. ಕುಟುಂಬದ ಜನರೊಡನೆ ನಮಗಿರುವ ಸಂಬಂಧವನ್ನು ಮುರಿಯಬಾರದು. ಅವರಲ್ಲಿ ಸರಿಯಾದ ಭಾವನೆಗಳನ್ನು ತುಂಬಿ ಅವರ ಮನಸ್ಸನ್ನು ಬದಲಾಯಿಸಬೇಕು."

ಬೊಂಬಾಯಿನ ವಕ್ತೃತ್ವೋತ್ತೇಜಕ ಸಭೆಯಲ್ಲಿ ಕಳೆದ ೬೦ ವರ್ಷ

ಗಳ ಮರಾಠೀ ಸಾಹಿತ್ಯವನ್ನು ಕುರಿತು ಮಾತನಾಡಿದರು. ಸಾಹಿತ್ಯದ ಸ್ಥಿತಿಯನ್ನು ಕುರಿತು ವಿಷಾದವನ್ನು ವ್ಯಕ್ತಪಡಿಸಿದರು; ನಮ್ಮ ಜನ ಕಲ್ಲಿನಂತೆ ಅಭೇದ್ಯರಾಗಿದಾರೆಂದು ಹೇಳಿ, ಏನು ಪ್ರೋತ್ಸಾಹ ಕೊಟ್ಟರೆ ತಾನೆ ನಮ್ಮಲ್ಲಿ ಪ್ರಗತಿಯಾಗುತ್ತದೆಯೆ ಎಂದು ಪ್ರಶ್ನಿಸಿದರು.

೧೮೮೧ ರ ಮಾರ್ಚಿಯಲ್ಲಿ ಅವರಿಗೆ ಪ್ರಿಯವಾದ ಪುಣೆಗೆ ಪುನಃ ವರ್ಗವಾಯಿತು. ೧೮೮೧ ರಿಂದ ೧೮೯೩ರ ವರೆಗಿನ ಅವರ ಔದ್ಯೋಗಿಕ ಜೀವನವನ್ನು ಈಗ ಪರಿಶೀಲಿಸೋಣ.

ಅವರು ಪುಣೆಗೆ ಸಬಾರ್ಡಿನೇಟ್ ಜಡ್ಜ್‌ರಾಗಿ ಬಂದರು. ಸ್ವಲ್ಪ ಕಾಲದಲ್ಲಿಯೆ ಅವರನ್ನು ಅಡಿಷನಲ್ ಸ್ಪೆಷಲ್ ಜಡ್ಜರಾಗಿ ಡಾ. ಪೋಲೆನ್‌ರ ಕೈ ಕೆಳಗೆ ನೇಮಿಸಿದರು. ದಖನೀ ರೈತರ ಪರಿಹಾರ ಶಾಸನದ ಪ್ರಕಾರ ಜಾರಿಗೆ ಬಂದ ಕೇಸುಗಳ ಮೇಲ್ವಿಚಾರಣೆ ಅವರ ಕೆಲಸವಾಗಿತ್ತು. ಆ ಕಾನೂನು ಜಾರಿಗೆ ಬಂದ ಜಿಲ್ಲೆಗಳಲ್ಲಿ ರಾನಡೆ ಸಂಚಾರ ಮಾಡಬೇಕಾಗಿತ್ತು. ಆ ಕಾನೂನು ಪರಿಹರಿಸಬೇಕೆಂದಿದ್ದ ಸಮಸ್ಯೆಗಳನ್ನು ಕುರಿತು ರಾನಡೆ ದೀರ್ಘವಾಗಿ ಯೋಚಿಸಿದ್ದುದರಿಂದ ಅವರಿಗೆ ಈ ಕೆಲಸ ತಕ್ಕುದಾಗಿಯೆ ಇತ್ತು. ಅವರು ತಮ್ಮ ಕ್ಷೇತ್ರದ ಮೂಲೆಮೂಲೆಗೂ ಹೋಗಿ ನೋಡಿ ಕೆಲಸಗಳನ್ನು ಬಹು ಮನಃಪೂರ್ವಕವಾಗಿ ನೆರವೇರಿಸಿದರು. ಹಿಂದೆ ಕೆಲಸದಲ್ಲಿದ್ದವರು ಇಷ್ಟು ಶ್ರಮವಹಿಸುತ್ತಿರಲಿಲ್ಲ. ಪ್ರತಿಯೊಂದು ಚಿಕ್ಕ ಹಳ್ಳಿಗೂ ಹೋಗಿ ಶ್ರಮ ಪಡುವುದರ ಬದಲು ಹಿಂದಿನವರಂತೆ ರಿಕಾರ್ಡುಗಳನ್ನು ತಾಲೂಕು ಸ್ಥಳಕ್ಕೆ ಏಕೆ ತರಿಸಿಕೊಳ್ಳಬಾರದೆಂದು ರಮಾಬಾಯಿ ರಾನಡೆ ಆಕ್ಷೇಪಿಸಿದರು. ಅದಕ್ಕೆ ರಾನಡೆ ಹೇಳಿದರು:

"ತಾಲೂಕು ಸ್ಥಳದಲ್ಲಿ ಇದ್ದುಕೊಂಡು ರಿಕಾರ್ಡುಗಳಿಗೆ ಹೇಳಿ ಕಳಿಸಿದರೆ ಚತುರರಾದ ಜನ ತಮಗೆ ಇಷ್ಟಬಂದ ಚಿತ್ರವನ್ನು ಮಾತ್ರ ಅಧಿಕಾರಿಯ ಮುಂದೆ ಇಡುತ್ತಾರೆ; ರೈತರ ನಿಜವಾದ ಸ್ಥಿತಿ ಗೊತ್ತಾಗುವುದಿಲ್ಲ. ನಿಜವಾದ ಪರಿಸ್ಥಿತಿಯನ್ನು ಅರಿತು ತೊಂದರೆಗಳನ್ನು ಪರಿಹರಿಸಬೇಕೆಂಬುದು ಸರಕಾರದ ಮುಖ್ಯ ಉದ್ದೇಶ. ಕೆಲವರಿಗೆ ಇದು ಅರ್ಥವಾಗದೆ ಸೋಮಾರಿತನದಿಂದ ಇರುತ್ತಾರೆ."

ಕೋರ್ಟಿಗೆ ಹೋಗುವ ಖರ್ಚುವೆಚ್ಚಗಳನ್ನು ಕಡಮೆ ಮಾಡುವ ಗುರಿಯಿಂದ ವಿವಾದಗಳ ತೀರ್ಮಾನಕ್ಕಾಗಿ ರಾಜಿದಾರರನ್ನು ಏರ್ಪಡಿಸುವುದು ರೈತರ ಪರಿಹಾರ ಕಾನೂನಿನ ಒಂದು ಮುಖ್ಯ ಉದ್ದೇಶವಾಗಿತ್ತು. ಆ ಕೆಲಸಕ್ಕೆ ಅಗತ್ಯವಾದ ಪ್ರಾಮಾಣಿಕರಾದ ದೊಡ್ಡ ಮನುಷ್ಯರು

ದೊರೆಯುವುದು ಕಷ್ಟವಾದದ್ದರಿಂದ ಕಾನೂನನ್ನು ರದ್ದುಮಾಡಬೇಕೆಂಬ ಮಾತು ಎದ್ದಿತ್ತು. ಆದರೆ ರಾನಡೆಯವರ ಉತ್ಸಾಹಯುತ ಕಾರ್ಯದಿಂದಲೂ ಸಮರ್ಥನೆಯಿಂದಲೂ ಕಾನೂನು ರದ್ದಾಗುವುದು ನಿಂತಿತು.

೧೮೮೪ರಲ್ಲಿ ಅವರು ಪುಣೆಯ ಸ್ಮಾಲ್ ಕಾಸಸ್ ಕೋರ್ಟಿನ ಜಡ್ಜ ರಾಗಿ ನೇಮಕವಾದರು. ಇದಾದ ಸ್ವಲ್ಪ ಕಾಲದಲ್ಲಿಯೇ ಡಾಕ್ಟರ್ ಪೋಲನ್ ರಜದ ಮೇಲೆ ಇಂಗ್ಲೆಂಡಿಗೆ ಹೊರಟು ಹೋದರು. ರಾನಡೆಯನ್ನು ಹಂಗಾಮಿ ಛೀಫ್ ಸ್ಪೆಷಲ್ ಜಡ್ಜರನ್ನಾಗಿ ನೇಮಕ ಮಾಡಿದರು. ತಿರುಗಿ ರೈತರ ಪರಿಹಾರ ಕಾನೂನಿನ ಕೆಲಸಗಳನ್ನು ನಡಸಲು ಅವರಿಗೆ ಅನುವಾಯಿತು. ಆಂಗ್ಲೋ ಇಂಡಿಯನ್ ಪತ್ರಿಕೆಗಳು ಅವರ ನೇಮಕವನ್ನು ಉಗ್ರವಾಗಿ ಆಕ್ಷೇಪಿಸಿದವು. ೧೮೮೭ ರಲ್ಲಿ ಈ ಕೆಲಸ ಖಾಯಂ ಆಯಿತು. ೧೮೯೩ ರಲ್ಲಿ ಹೈಕೋರ್ಟಿಗೆ ನೇಮಕವಾಗಿ ಹೋಗುವವರೆಗೂ ರಾನಡೆ ಈ ಕೆಲಸದಲ್ಲಿದ್ದರು.

೧೮೮೫ರಲ್ಲಿ ಬೊಂಬಾಯಿ ಗವರ್ನರ್ ಲಾರ್ಡ್ ರೇ ರಾನಡೆಯವರನ್ನು ಬೊಂಬಾಯಿ ಶಾಸನ ಸಭೆಯ ನ್ಯಾಯ ಸದಸ್ಯರನ್ನಾಗಿ ನಾಮಕರಣ ಮಾಡಿದರು. ಲಾರ್ಡ್ ರೇ ಮತ್ತು ರಾನಡೆ ಸ್ನೇಹಿತರಾಗಿದ್ದರು. ರಾನಡೆಯವರ ಗುಣಗಳನ್ನು ಲಾರ್ಡ್ ರೇ ಅರಿತಿದ್ದರು. ಅವುಗಳನ್ನು ಪ್ರಯೋಜನಕರವನ್ನಾಗಿ ಮಾಡಬೇಕೆಂಬುದು ಅವರ ಇಚ್ಛೆಯಾಗಿತ್ತು. ರಾನಡೆ ೧೮೯೦ ಮತ್ತು ೧೮೯೩ ರಲ್ಲಿ ಪುನಃ ನ್ಯಾಯ ಸದಸ್ಯರಾಗಿದ್ದರು.

೧೮೮೬ರಲ್ಲಿ ಸರಕಾರ ವೆಚ್ಚಗಳನ್ನು ಪರಿಶೀಲಿಸಿ ಉಳಿತಾಯದ ಮಾರ್ಗಗಳನ್ನು ಸೂಚಿಸಲು ಒಂದು ಸಮಿತಿಯನ್ನು ನೇಮಕ ಮಾಡಿತು. ಹಣಕಾಸಿನ ವಿವರಗಳ ಮೇಲೆ ರಾನಡೆಯವರಿಗಿದ್ದ ಹತೋಟಿಯನ್ನರಿತ ಲಾರ್ಡ್ ರೇ, ಅವರನ್ನು ಬೊಂಬಾಯಿ ಸರಕಾರದ ಪರವಾಗಿ ಸಮಿತಿಯ ಸದಸ್ಯರನ್ನಾಗಿ ನೇಮಕ ಮಾಡಿಸಿದರು. ಸಮಿತಿಯ ಸದಸ್ಯರಾಗಿ ಅವರು ಸಿಮ್ಲಾದಲ್ಲಿದ್ದಾಗ, ಅನೇಕ ಪ್ರಶ್ನೆಗಳನ್ನು ವಿವರವಾಗಿ ಪರಿಶೀಲಿಸುವ ಅವಕಾಶ ದೊರೆಯಿತು ; ಬೇರೆ ಸಂದರ್ಭದಲ್ಲಿ ಸಂಬಂಧಪಟ್ಟ ದಾಖಲೆಗಳು ದೊರೆಯುತ್ತಿರಲಿಲ್ಲ. ಸಮಿತಿಯಲ್ಲಿ ರಾನಡೆ ಕೆಲಸ ಮಾಡುತ್ತಿದ್ದ ರೀತಿ ಸ್ನೇಹಿತರೊಬ್ಬರಿಗೆ ಅವರು ಬರೆದ ಪತ್ರದಿಂದ ವ್ಯಕ್ತವಾಗುತ್ತದೆ. " ಯಾವ ವಿಷಯವನ್ನು ಪರಿಶೀಲನೆಗೆ ತೆಗೆದುಕೊಂಡರೂ ಮೊದಲು ಹೆಚ್ಚಾಗಿ ಓದ

ಬೇಕಾಗುತ್ತದೆ. ಓದುವಾಗ ನಾನು ಧಾರಾಳವಾಗಿ ಟಿಪ್ಪಣಿಗಳನ್ನು ಮಾಡು ತ್ತೇನೆ. ಈ ಟಿಪ್ಪಣಿಗಳನ್ನು ಉಪಯೋಗಿಸಿಕೊಂಡು ಅಧಿಕೃತ ಟಿಪ್ಪಣಿ ಯನ್ನು ತಯಾರಿಸಿ ಸಮಿತಿಗೆ ಅಥವಾ ಅದರ ಪ್ರಮುಖ ಸದಸ್ಯರಿಗೆ ತಿದ್ದು ಪಡಿಗಾಗಿ ಕೊಡುತ್ತೇನೆ. ಈ ರೀತಿ ಶೋಧನೆ ನಡೆದ ಮೇಲೆ ಅದನ್ನು ಮುದ್ರಿಸಿ ಪ್ರಚಾರಕ್ಕೆ ಕಳಿಸುತ್ತೇನೆ."

ಜ್ಞಾಪಕಪತ್ರಗಳ ಕರಡುಗಳನ್ನು ನೋಡುವಾಗ ರಾನಡೆ ಮೇಲಿಂದ ಮೇಲೆ ತಿದ್ದಿ ಹೊಸ ವಿಷಯಗಳನ್ನು ಸೇರಿಸುತ್ತಿದ್ದರಂತೆ. ಹೀಗೆ ಐದಾರು ಬಾರಿ ಕರಡುಗಳನ್ನು ನೋಡುವ ವೇಳೆಗೆ ಮುದ್ರಣಕಾರನ ಸಹನೆ ಮೀರಿ ಆತ ರಾನಡೆಯವರಿಗೆ ಪುನಃ ಅವನ್ನು ನೋಡಲು ಅವಕಾಶ ಕೊಡದೆ ಮುದ್ರಿಸುತ್ತಿದ್ದನಂತೆ.

ಸಮಿತಿಯ ವರದಿಯ ಅನೇಕ ಭಾಗಗಳಿಗೆ ರಾನಡೆ ಭಿನ್ನಾಭಿಪ್ರಾಯ ಗಳನ್ನು ಸೂಚಿಸಿದರು. ಸಬ್ ಜಡ್ಜರ ಸಂಖ್ಯೆಯನ್ನು ಕಡಮೆಮಾಡಬೇ ಕೆಂದೂ ಹೊಸಬರನ್ನು ನೇಮಕ ಮಾಡುವಾಗ ಅವರ ಸಂಬಳದ ದರವನ್ನು ಕಡಮೆ ಮಾಡಬೇಕೆಂದೂ ಸಮಿತಿಯ ಬಹುಮಂದಿ ಸದಸ್ಯರು ಸೂಚಿಸಿದ್ದನ್ನು ರಾನಡೆ ಆಕ್ಷೇಪಿಸಿದರು. ಶಿಕ್ಷಣದ ಶಾಖೆಯಲ್ಲಿ ಖೋತಾ ಮಾಡಬೇಕೆಂಬ ಸಲಹೆಯನ್ನೂ ವಿರೋಧಿಸಿದರು. ಹಣಕಾಸಿನ ಸಮಿತಿಯಲ್ಲಿ ಎಸಗಿದ ಅಮೂಲ್ಯ ಸೇವೆಯ ಗುರುತಾಗಿ ೧೮೮೭ರಲ್ಲಿ ಅವರಿಗೆ ಸಿ. ಐ. ಈ. ಎಂಬ ಬಿರುದು ದೊರೆಯಿತು.

ಹೈ ಕೋರ್ಟಿನ ನ್ಯಾಯಾಧೀಶರಾಗಿದ್ದ ಕೆ. ಟಿ. ತೇಲಂಗರು ೧೮೯೩ ರಲ್ಲಿ ತೀರಿಹೋದರು. ಹೈಕೋರ್ಟಿನಲ್ಲಿ ಅವರ ಸ್ಥಾನ ಎರಡು ತಿಂಗಳ ಕಾಲ ಖಾಲಿ ಬಿದ್ದಿತ್ತು. ರಾನಡೆಯವರನ್ನು ಆ ಸ್ಥಾನಕ್ಕೆ ನೇಮಕ ಮಾಡಬೇಕೆಂಬ ಮಾತು ಇಂಡಿಯಾದಲ್ಲಿ ಎಲ್ಲೆಲ್ಲೂ ಕೇಳಬರುತ್ತಿತ್ತು. ರಾಷ್ಟ್ರೀಯ ಚಳವಳಿಯ ಸಂಬಂಧವನ್ನು ಬಿಡುವ ಇಷ್ಟವನ್ನು ಸೂಚಿಸಿದಲ್ಲಿ ಮುಂದಿನ ಹುದ್ದೆಗೆ ಬಡ್ತಿ ದೊರೆಯುವುದಾಗಿ ಯೂರೋಪಿಯನ್ ಸ್ನೇಹಿ ತರು ತಿಳಿಸಿದರು. ಹಾಗೆ ಮಾಡುವುದು ರಾನಡೆಯವರ ಮನಸ್ಸಿಗೆ ಹಿತ ವಾಗಿರಲಿಲ್ಲ. ೧೮೮೦ ರಲ್ಲಿ ಥಾಣ ಸೆಷನ್ಸ್ ಜಡ್ಜರ ಪದವಿ ರಾನಡೆಗೆ ದೊರೆಯಬೇಕಾಗಿತ್ತು, ಆದರೆ ದೊರೆಯಲಿಲ್ಲ. ಆ ಸಂದರ್ಭದಲ್ಲಿ ಛೀಫ್ ಜಸ್ಟಿಸ್ ಸರ್ ಮೈಕೇಲ್ ವೆಸ್ಟ್ರಾಪ್ ಈ ರೀತಿಯಾಗಿ ಪತ್ರ ಬರೆದರು:

"ನಿಮ್ಮ ಲೇಖನಗಳು ನಿಮ್ಮ ಬಡ್ತಿಗೆ ಅಡ್ಡಿಯಾಗಿವೆ. ನಿಮಗೆ ಬಡ್ತಿ ಬೇಕಾದರೆ ನಿಮ್ಮ ಚಳವಳಿಗಳನ್ನು ನಿಲ್ಲಿಸಿ." ರಾನಡೆಯವರ ಉತ್ತರ ಈ ರೀತಿಯಾಗಿತ್ತು: "ನಾನು ನಿಮಗೆ ಕೃತಜ್ಞನಾಗಿದ್ದೇನೆ. ನನ್ನ ಅಗತ್ಯಗಳು ಅಲ್ಪ. ಸ್ವಲ್ಪದರಲ್ಲಿಯೇ ನಾನು ಜೀವನವನ್ನು ಸಾಗಿಸಬಲ್ಲೆ. ನಮ್ಮ ದೇಶದ ಹಿತದ ವಿಷಯದಲ್ಲಿ ನನಗೆ ನಿಜವೆಂದು ತೋರಿದ್ದನ್ನು ನಾನು ನುಡಿಯಲೇ ಬೇಕು." ಈ ಬಾರಿಯೇನೋ ಅರ್ಹತೆಗೆ ತಕ್ಕಂತೆ ಅವರಿಗೆ ಸೆಷನ್ಸ್ ಜಡ್ಜರ ಪದವಿ ದೊರೆಯಿತು.

ಅವರಿಗೆ ಆ ಹುದ್ದೆ ದೊರೆತದ್ದರಿಂದ ಭಾರತದಲ್ಲೆಲ್ಲ ಸಂತೋಷ ಉಂಟಾಯಿತು. ಷೋಲಾಪುರದಲ್ಲಿ ಅವರಿಗೆ ಮೊದಲು ಸನ್ಮಾನವಾಯಿತು. ಆಮೇಲೆ ಪುಣೆಯಲ್ಲಿ. ಪುಣೆಯಲ್ಲಿ ದೀರ್ಘಕಾಲ ಸಂತೋಷ ಸಮಾರಂಭಗಳು ನಡೆದು ಅವುಗಳನ್ನು ಮಹಾದೇವ ಉತ್ಸವವೆಂದೇ ಕರೆದರು. ಪ್ರಾಯಶಃ ಪುಣೆಯಲ್ಲಿನ ಪ್ರತಿಯೊಂದು ಸಂಘವೂ ಅವರನ್ನು ಆಹ್ವಾನಿಸಿತು. ಒಂದು ದಿನದಲ್ಲಿ ಅವರು ನಾಲ್ಕೈದು ಸನ್ಮಾನ ಸಭೆಗಳಲ್ಲಿ ಹಾಜರಿರಬೇಕಾಗುತ್ತಿತ್ತು. ಹಿರಾಬಾಗಿನಲ್ಲಿ ನಡೆದ ಸನ್ಮಾನ ಸಭೆ ಅತ್ಯಂತ ವೈಭವಯುತವಾಗಿತ್ತು. ಅಲ್ಲಿಗೆ ಹೋಗುವಾಗ ದಾರಿಯಲ್ಲಿ ಅನೇಕ ಕಡೆಗಳಲ್ಲಿ ರಾನಡೆಯವರ ಮೇಲೆ ಪುಷ್ಪವೃಷ್ಟಿಯನ್ನು ಕರೆದರು.

ಈ ಸನ್ಮಾನಗಳು ಜಾಸ್ತಿಯಾದುವೆಂದು ತಿಳಿದು "ಪುಣೆಯ ಅನಭಿಷಿಕ್ತ ರಾಜ"ನು (ರಾನಡೆಯನ್ನು ಈ ರೀತಿಯಲ್ಲಿ ಕರೆಯುತ್ತಿದ್ದರು) ಪುರಜನರಿಗೆ ತಿಳಿವಳಿಕೆ ಕೊಡದೆ ಒಂದು ಸಂಜೆ ಬೊಂಬಾಯಿಗೆ ಹೊರಟರು. ಹೇಗೋ ಸಮಾಚಾರವನ್ನು ತಿಳಿದು ಅವರ ಸ್ನೇಹಿತರು ಸ್ಟೇಷನ್ನಿನಲ್ಲಿ ಸೇರಿ ರಾನಡೆಯವರನ್ನು ಹಾರ ತುರಾಯಿಗಳಿಂದ ತುಂಬಿ ವಾದ್ಯ ವೈಭವದೊಡನೆ ಬೀಳ್ಕೊಟ್ಟರು.

ಈ ಸನ್ಮಾನ ಪ್ರವಾಹಗಳು ಆಕಸ್ಮಿಕವಾಗಿ ಜನಪ್ರಿಯನಾದ ವೀರನಿಗೆ ದೊರೆತ ಮರ್ಯಾದೆಗಳಲ್ಲ. ಅನೇಕ ವರ್ಷ ಕಾಲ ಒಂದೇ ಸಮನಾಗಿ ದುಡಿದ ಲೋಕೋಪಕಾರಗಳಿಗಾಗಿ ದೊರೆತ ಗೌರವವದು. ರಾನಡೆಯವರು ಸ್ಥಾಪಿಸಿದ ಅಥವಾ ಪುನರುಜ್ಜೀವನಗೊಳಿಸಿದ ಸಂಸ್ಥೆಗಳ ಹೆಸರುಗಳನ್ನು ಅವಲೋಕಿಸಿದರೆ ಈ ವಿಷಯ ಸ್ಪಷ್ಟವಾಗುತ್ತದೆ. ಅವು ಯಾವುವೆಂದರೆ: ಸಾರ್ವಜನಿಕ ಸಭಾ, ಸಭಾದ ತ್ರೈಮಾಸಿಕ ಪತ್ರಿಕೆ, ಹಿರಾ

ಬಾಗಿನಲ್ಲಿನ ಪುರಭವನ, ಪುಣೆಯ ದೇಶೀಯ ಸಾರ್ವಜನಿಕ ಪುಸ್ತಕ ಭಂಡಾರ, ಕೈಗಾರಿಕಾ ಸಮ್ಮೇಳನಗಳು, ಕೈಗಾರಿಕಾ ಪ್ರದರ್ಶನಗಳು, ಕೈಗಾರಿಕಾ ಸಂಘ, ರೇ ವಸ್ತು ಸಂಗ್ರಹಾಲಯ, ಹತ್ತಿ ಮತ್ತು ರೇಷ್ಮೆಯ ನೂಲುವ ಮತ್ತು ನೆಯ್ಯುವ ಕಂಪೆನಿ, ಲೋಹ ನಿರ್ಮಾಣ ಕಾರ್ಖಾನೆ; ಫರ್ಗ್ಯುಸನ್ ಕಾಲೇಜು, ಸ್ತ್ರೀಯರ ಹೈಸ್ಕೂಲು, ದೇಶೀಯ ಭಾಷಾನುವಾದ ಸಂಘ, ಪಂಚಾಯತಿ ಕಚೇರಿ, ಸಬ್-ಜಡ್ಜರುಗಳ ಸಮ್ಮೇಳನ. ಪುಣೆಯ ವಾಣಿಜ್ಯ ಬ್ಯಾಂಕು, ಪ್ರಾರ್ಥನಾ ಸಮಾಜ ಮಂದಿರ, ವಕ್ತೃತ್ವೋತ್ತೇಜಕ ಸಭಾ, ಮರಾಠೀ ಸಾಹಿತ್ಯೋತ್ತೇಜಕ ಸಭಾ, ಪುಣೆಯ ವಸಂತೋಪನ್ಯಾಸ ಗಳು, ಪುಣೆಯ ಬಣ್ಣ ಹಾಕುವ ಕಂಪೆನಿ, ರೇ ಪೇಪರು ಮಿಲ್ಲು.

ಈ ಸಂಸ್ಥೆಗಳಿಗೆ ಬೇಕಾಗುವ ಕಟ್ಟಡ ಮೊದಲಾದುವಕ್ಕೆ ರಾನಡೆ ಉದಾರವಾಗಿ ಸಹಾಯ ಮಾಡಿದರು. ಷೋಲಾಪುರದಲ್ಲಿ ದೇವಸ್ಥಾನ ವೊಂದರ ಮುಂದೆ ಸಭೆಗೆ ಬೇಕಾದ ಕಟ್ಟಡವನ್ನೂ. ಆಳಂದಿಯಲ್ಲಿ ಒಂದು ಧರ್ಮಶಾಲೆಯನ್ನೂ ಕಟ್ಟಿಸಿದರಂತೆ; ಪರ್ವತೀ ಗುಡ್ಡದ ಕೆಳಗೆ ಕುಡಿಯುವ ನೀರಿನ ವ್ಯವಸ್ಥೆ ಮಾಡಿದರು, ಲೈಬ್ರರಿಗಳಿಗೆ ಪುಸ್ತಕಗಳನ್ನಿತ್ತರು. ಅವರ ಮನೆ ಬಡಜನರಿಂದಲೂ ಆಶ್ರಯವನ್ನು ಬಯಸಿ ಬಂದವರಿಂದಲೂ ತುಂಬಿ ರುತ್ತಿತ್ತು. ಬಡ ವಿದ್ಯಾರ್ಥಿಗಳಿಗೆ ಊಟ, ಫೀ ಮತ್ತು ಪುಸ್ತಕಗಳಿಗಾಗಿ ಸಹಾಯ ಮಾಡುತ್ತಿದ್ದರು. ಪುಣೆಯನ್ನು ಬಿಡುವ ಮೊದಲು ಅಲ್ಲಿನ ಹಲವು ಸಂಸ್ಥೆಗಳ ಉಪಯೋಗಕ್ಕಾಗಿ ೨೫,೦೦೦ ರೂ. ಗಳ ಸಹಾಯವನ್ನು ನೀಡಿದರು.

# ೭. ಸಮಾಜಸುಧಾರಕ

ಪಾಶ್ಚಾತ್ಯ ಸಂಸ್ಕೃತಿಯ ಸಂಸರ್ಗದಿಂದ ಭಾರತದ ಜೀವನದಲ್ಲಿ ಒಂದು ಹೊಸ ಅರ್ಥ ಬೆಳಗಿತು. ಅದರ ಪ್ರಭಾವದಲ್ಲಿ ನಮ್ಮ ದೇಶದ ಅನೇಕ ಸಾಮಾಜಿಕ ಆಚಾರ ವ್ಯವಹಾರಗಳು ನಿಂದ್ಯವಾಗಿ ತೋರಲಾರಂಭಿಸಿದುವು. ಅವು ಯಾವುವೆಂದರೆ—ಬಾಲ್ಯವಿವಾಹ, ಬಲಾತ್ಕಾರದ ವಿಧವಾ ಪದ್ಧತಿ, ವಿಷಮ ವಿವಾಹಗಳು (ಎಂದರೆ ವಯಸ್ಕರಾದ ಗಂಡಸರಿಗೂ ಚಿಕ್ಕ ಹೆಣ್ಣುಮಕ್ಕಳಿಗೂ ನಡೆಯುವ ವಿವಾಹಗಳು), ವರದಕ್ಷಿಣೆಯ ಪದ್ಧತಿ ಮತ್ತು ಅದರಿಂದುಂಟಾಗುವ ಕಷ್ಟಗಳು ಕೆಡುಕುಗಳು, ವಿವಾಹೋತ್ಸವಕ್ಕಾಗಿ ಮಾಡುವ ಅತಿಯಾದ ಖರ್ಚುಗಳು, ಸ್ತ್ರೀಯರನ್ನು ಪ್ರತ್ಯೇಕವಾಗಿಡುವಿಕೆ, ಅವರಿಗೆ ವಿದ್ಯಾಭ್ಯಾಸ ಮಾಡಿಸದಿರುವಿಕೆ, ವಿದೇಶ ಸಂಚಾರವನ್ನು ಪಾಪಕರವೆಂದು ತಿಳಿಯುವುದು, ಸಮಾಜವನ್ನು ನಾನಾ ಪಂಗಡಗಳಾಗಿ ಒಡೆಯುವ ಜಾತಿಪದ್ಧತಿ, ಅದರ ಪರಿಣಾಮವಾಗಿ ಒಬ್ಬರಲ್ಲೊಬ್ಬರು ಊಟ ಮಾಡದಿರುವುದು, ಕೊಟ್ಟು ತರದಿರುವುದು, ಜನವರ್ಗದ ಒಂದು ದೊಡ್ಡ ಭಾಗವನ್ನು ಅಸ್ಪೃಶ್ಯರೆಂದು ದೂರವಿಡುವುದು, ಹೋಳಿ ಮೊದಲಾದ ಹಬ್ಬಗಳಲ್ಲಿ ಅಶ್ಲೀಲವಾದ ಆಚರಣೆಗೆ ಅವಕಾಶ ಕೊಡುವುದು, ನಾಯಕಸಾನಿಯರ ಕಸಬಿಗೆ ಉತ್ತೇಜನ ಕೊಡುವುದು, ಇತ್ಯಾದಿ. ಜನಜೀವನದಲ್ಲಿ ವಿಷವೂಡಿ ಸಮಾಜವನ್ನು ದುರ್ಬಲಗೊಳಿಸುವ ವಸ್ತುಗಳೆಂದು ತಿಳಿದು ಇವುಗಳನ್ನು ನಿರ್ಮೂಲಗೊಳಿಸುವ ಸಾಧನೋಪಾಯಗಳನ್ನು ಅರಸುತ್ತಿದ್ದ ಸಮಾಜ ಸುಧಾರಕರಲ್ಲಿ ರಾನಡೆಯೂ ಒಬ್ಬರಾಗಿದ್ದರು—ತಮ್ಮ ಕಾಲೇಜು ದಿನಗಳಿಂದಲೇ. ತಮ್ಮ ಜೀವನದ ಉದ್ದಕ್ಕೂ ರಾನಡೆ ಸುಧಾರಕರಾಗಿದ್ದು ಬಹು ನಿಷ್ಠೆಯಿಂದ ಸಮಾಜ ಸೇವೆಯನ್ನೆಸಗಿದರು.

ಬೊಂಬಾಯಿಯ ಪ್ರಸಿದ್ಧ ಕವಿ, ಪತ್ರಿಕೋದ್ಯಮಿ ಮತ್ತು ಸುಧಾರಕನಾದ ಬಿ. ಎಂ. ಮಲಬಾರಿ ೧೮೮೪ರಲ್ಲಿ "ಬಾಲ್ಯ ವಿವಾಹ" ಮತ್ತು "ಬಲಾತ್ಕಾರದ ವಿಧವಾ ಪದ್ಧತಿ" ಇವುಗಳನ್ನು ಕುರಿತು ಎರಡು ಸಣ್ಣ ಹೊತ್ತಗೆಗಳನ್ನು ಬರೆದು ಅವುಗಳನ್ನು ಮುಖ್ಯರಾದ ಅಧಿಕಾರಿಗಳಿಗೂ ಸಾರ್ವಜನಿಕ ನಾಯಕರಿಗೂ ಕಳಿಸಿದನು. ಅಂದಿನಿಂದ ೧೮೯೧ರ ವರೆಗೆ

ಈ ಸಮಾಜ ಪದ್ಧತಿಗಳನ್ನು ಕುರಿತು ಬಿರುಸಾದ ಚಳವಳಿಯೂ ತೀಕ್ಷ್ಣವಾದ ವಾಗ್ವಾದಗಳೂ ನಡೆದವು.

ಈ ಧರ್ಮಯುದ್ಧದಲ್ಲಿ ಸಹಾಯ ಮಾಡುವುದಾಗಿ ರಾನಡೆ ಮಲಬಾರಿಗೆ ಮಾತು ಕೊಟ್ಟಿದ್ದರು ಮತ್ತು ಅದರಂತೆ ನಡೆದರು. ಈ ವಿಚಾರದಲ್ಲಿ ರಾನಡೆಯವರ ಸಾಮಾನ್ಯಾಭಿಪ್ರಾಯ ಈ ರೀತಿಯಾಗಿತ್ತು :

"ಬಾಲ್ಯ ವಿವಾಹದಿಂದ ಗಂಡಹೆಂಡಿರು ಬೇಗ ಕೂಡಿಕೊಳ್ಳುತ್ತಾರೆ; ಅದರ ಪರಿಣಾಮವಾಗಿ ಜನಾಂಗದ ದೈಹಿಕ ಸ್ಥಿತಿ ಕ್ಷೀಣಿಸುತ್ತದೆ, ಮುಂಬರುವ ಜನಾಂಗಕ್ಕೆ ಅದೊಂದು ಹೊರಲಾಗದ ಹೊರೆಯಾಗಿ ಅವರ ಆಶಯಗಳನ್ನು ಬಂಧಿಸುತ್ತದೆ, ಯೌವನಕ್ಕೆ ಸಹಜವಾದ ಸ್ವಪ್ನಸಾಹಸ ಜೀವನವನ್ನೂ ಸ್ವಾತಂತ್ರ್ಯೇಚ್ಛೆಯನ್ನೂ ನಿರ್ಮೂಲಗೊಳಿಸುತ್ತದೆ, ವ್ಯಾಸಂಗದ ಇಚ್ಛೆಯನ್ನು ಕಡಮೆ ಮಾಡುತ್ತದೆ, ಸಾಹಸವನ್ನು ತಡೆಯುತ್ತದೆ, ಒಟ್ಟಿನಲ್ಲಿ ಅವರ ಬೆಳವಣಿಗೆಯನ್ನೇ ಕುಂಠಿತಗೊಳಿಸುತ್ತದೆ; ಇವೆಲ್ಲದರ ಫಲವಾಗಿ ದುರ್ಬಲರಾದ ರೋಗಿಷ್ಠರಾದ ಪ್ರಜಾ ಜನರ ಸಂಖ್ಯೆ ಮಿತಿಮೀರಿ ಹೆಚ್ಚಿ ದೇಶ ದಾರಿದ್ರ್ಯಕ್ಕೆ ಒಳಗಾಗುತ್ತದೆ; ಅಲ್ಲದೆ ಬಾಲ್ಯ ವೃಥ ವ್ಯದ ದುಷ್ಪರಿಣಾಮಗಳಿಗೆ ಗುರಿಯಾಗುತ್ತದೆ."

ಹೆಣ್ಣುಮಕ್ಕಳ ಮದುವೆಯ ಕನಿಷ್ಠ ವಯಸ್ಸನ್ನು ಕಾನೂನಿನ ಪ್ರಕಾರ ನಿರ್ಧರಿಸುವಂತೆಯೂ ಹಿಂದು ವಿವಾಹ ಪದ್ಧತಿಯ ವಿಷಯದಲ್ಲಿ ಇತರ ವಿಧಗಳಲ್ಲಿ ಶಾಸನವನ್ನು ಜಾರಿಗೆ ತರುವಂತೆಯೂ ಸರಕಾರವನ್ನು ಒತ್ತಾಯ ಮಾಡುವುದು ಮಲಬಾರಿಯವರ ಉದ್ದೇಶವಾಗಿತ್ತು. ಆಚಾರ ಶೀಲರಾದವರು ಈ ಪ್ರಯತ್ನವನ್ನು ಕಂಡು ಹೆದರಿದರು. ಇಂಥ ವಿಚಾರಗಳಲ್ಲಿ ಸರಕಾರದ ಸಹಾಯವನ್ನು ಕೋರುವುದು ತಪ್ಪೆಂದೂ ಅಧರ್ಮವೆಂದೂ ಅವರಿಗೆ ತೋರಿತು. ಸಮಾಜ ಸುಧಾರಣೆಯ ವಿಚಾರದಲ್ಲಿ ಉತ್ಸಾಹಿಗಳಾಗಿದ್ದ ಡಾಕ್ಟರ್ ಆರ್. ಜಿ. ಭಂಡಾರ್ಕರ್ ಮತ್ತು ಸರ್ ನಾರಾಯಣ ಚಂದಾವರ್ಕರ್ ಅಂಥವರೂ ಸಹ ಸಾಮಾಜಿಕ ವಿಚಾರಗಳಲ್ಲಿ ಸರಕಾರ ಕೈ ಹಾಕುವುದನ್ನು ವಿರೋಧಿಸಿದರು. ಅವರ ಅಭಿಪ್ರಾಯದಲ್ಲಿ, ಜನಾಭಿಪ್ರಾಯ ಬದಲಾಗುವವರೆಗೂ ಇಂಥ ವಿಚಾರಗಳಲ್ಲಿ ಸರಕಾರದ ಕಾನೂನು ಫಲಕಾರಿಯಾಗಲಾರದು; ಅದಕ್ಕೆ ಬದಲಾಗಿ, ಅದು ತೂಷ್ಣೀಭಾವದಲ್ಲಿರುವ ವಿರೋಧ ಶಕ್ತಿಗಳನ್ನು ಎಬ್ಬಿಸಿ ಸುಧಾರಣೆಯ ಸಾಧನೆಗೆ ಅಡ್ಡಿಗಳನ್ನು ಒದಗಿಸಬಹುದು. ರಾನಡೆಯವರಾದರೆ, ಕಾನೂನಿನ ಮೂಲಕ ಸಮಸ್ಯೆಯನ್ನು ಬಗೆಹರಿಸುವ ಸಲಹೆಗೆ ತಮ್ಮ ಒತ್ತಾಸೆಯನ್ನು ನೀಡಿದರು.

ಇಂಡಿಯಾ ಸರಕಾರದವರು "ಮಲಬಾರಿಯವರ ಟಿಪ್ಪಣಿಗಳ"ನ್ನು ಅಭಿಪ್ರಾಯಕ್ಕಾಗಿ ಪ್ರಾಂತ ಸರಕಾರಗಳಿಗೂ ದೇಶದ ಮುಂದಾಳುಗಳಿಗೂ ಕಳಿಸಿಕೊಟ್ಟರು. ಅದರಿಂದ ಚರ್ಚೆ ಬಿಸಿಯೇರಿತು. ಸಭೆಗಳೂ ವಿರೋಧ ಸಭೆಗಳೂ ನಡೆದವು. ಅರ್ಜಿಗಳೂ ಎದುರರ್ಜಿಗಳೂ ಹುಟ್ಟಿದವು.

ಸರಕಾರ ರಾನಡೆಯವರ ಅಭಿಪ್ರಾಯವನ್ನು ಕೇಳಲು ಅವರು "ಹಿಂದು ಸಮಾಜದಲ್ಲಿ ಸ್ವಯಂ—ನಿಯಂತ್ರಣ ಶಕ್ತಿ ಮಾಯವಾಗಿದೆ. ಪುರಾತನಾಭಿಪ್ರಾಯಗಳಿಗೆ ಕಟ್ಟು ಬಿದ್ದಿರುವ ಆ ಸಮಾಜವನ್ನು ವಿಮುಕ್ತಗೊಳಿಸಲು ಧಾರ್ಮಿಕವೆಂದು ಹೇಳಲಾದ ವಿಧಿಗಳನ್ನು ಒಂದೊಂದಾಗಿ ಸಡಿಲಿಸಬೇಕು. ಅವುಗಳ ಸ್ಥಾನದಲ್ಲಿ ಬದಲಾವಣೆಗೂ ಹೊಂದಾಣಿಕೆಗೂ ಸಗ್ಗುವ ಶಾಸನ ನಿಯಂತ್ರಣಗಳನ್ನು ತರಬೇಕು;—"ಸಮಾಜ ವಿಮುಕ್ತಿಗೆ ಇರುವ ಮಾರ್ಗ ಇದೊಂದೇ" ಎಂದು ನುಡಿದರು. ಸರಕಾರದ ಶಾಸನ ಈ ಮಾರ್ಗಗಳಲ್ಲಿ ಇರಬಹುದಾಗಿ ಸಲಹೆ ಮಾಡಿದರು: (ಅ) ಬಾಲಕ ಬಾಲಕಿಯರ ಮದುವೆಯ ಕನಿಷ್ಠ ವಯಸ್ಸುಗಳನ್ನು ಶಾಸನದ ಮೂಲಕ ವಿಧಾಯಕ ಮಾಡತಕ್ಕದ್ದು. ಬಾಲಕರ ವಯಸ್ಸಿನ ಪರಿಮಿತಿ ಸಾಮಾನ್ಯವಾಗಿ ೧೬ರಿಂದ ೧೮, ಬಾಲಕಿಯರದು ೧೦ರಿಂದ ೧೨ ಆಗಿರಬಹುದು. ಈ ವಯಃಪರಿಮಿತಿಗಳಿಗೆ ಮೊದಲು ಮದುವೆಯಾದಲ್ಲಿ ಮದುವೆಗಳು ರದ್ದಾಗುವಂತೆ ಶಾಸನ ನಿರ್ಬಂಧ ರೀತಿಯಲ್ಲಿ ಇರಬೇಕಾದದ್ದಿಲ್ಲ, ಆದರೆ ಮದುವೆಯಾದವರು ಅಪೇಕ್ಷಿಸಿದಲ್ಲಿ ಮದುವೆಯ ಬಂಧನವನ್ನು ಪ್ರಶ್ನಿಸುವ ಹಕ್ಕುಳ್ಳವರಾಗಿರುವಂತೆ ಅನುಮತಿ ಶಾಸನವಾಗಿರತಕ್ಕದ್ದು. (ಆ) ಮ್ಯುನಿಸಿಪಲ್ ಮತ್ತು ಸ್ಥಳೀಯ ಸಂಸ್ಥೆಗಳಿಗೆ ವಯಸ್ಸನ್ನು ಪ್ರಮಾಣೀಕರಿಸುವ ಅಧಿಕಾರ ಇರತಕ್ಕದ್ದು. (ಇ) ವಿಶ್ವವಿದ್ಯಾನಿಲಯದ ಗೌರವಗಳನ್ನೂ ಪದವಿಗಳನ್ನೂ ಬಯಸತಕ್ಕವರು ತಮ್ಮ ಅಭ್ಯಾಸದ ಅವಧಿಯಲ್ಲಿ ಅವಿವಾಹಿತರಾಗಿ ಇರತಕ್ಕದ್ದೆಂಬ ನಿಯಮವನ್ನು,—ಪೂರ್ವಭಾವಿಯಾಗಿ ತಕ್ಕ ತಿಳಿವಳಿಕೆ ಕೊಟ್ಟು—ಜಾರಿಗೆ ತರಬೇಕು. (ಈ) ಹದಿನಾಲ್ಕು ವರ್ಷ ವಯಸ್ಸಿಗೆ ಕಡಮೆ ಇರುವ ಹುಡುಗಿಯರೊಡನೆ ಸೇರುವುದು ಅಪರಾಧವೆಂಬುದಾಗಿ ವಿಧಿಸಿ ಪೀನಲ್ ಕೋಡಿನಲ್ಲಿ ತಕ್ಕ ಬದಲಾವಣೆ ಮಾಡಬೇಕು. (ಉ) ನಲವತ್ತೈದು ವರ್ಷ ಮತ್ತು ಅದಕ್ಕೂ ಮೀರಿದ ವಯಸ್ಸಿನ ಪುರುಷರು ಚಿಕ್ಕ ಕನ್ಯೆಯರನ್ನು ಮದುವೆಯಾಗುವುದನ್ನು ಕಾನೂನಿನಿಂದ ನಿಷೇಧಿಸಬೇಕು. (ಊ) ಮೊದ

ಲನೆಯ ಹೆಂಡತಿಯ ಜೀವಿತಕಾಲದಲ್ಲಿ,—ಆಕೆಯಲ್ಲಿ ಶಾಸ್ತ್ರಗಳಲ್ಲಿ ಉಕ್ತವಾಗಿರುವ ದೋಷ ಯಾವುದಾದರೂ ಇರುವ ಸಂದರ್ಭದಲ್ಲಿ ಮಾತ್ರ, ಎರಡನೆಯ ವಿವಾಹಕ್ಕೆ ಅವಕಾಶವಿರತಕ್ಕದ್ದು.

ಮಲಬಾರಿಯ ಟಿಪ್ಪಣಿಗಳಿಗೆ ಬಂದ ಉತ್ತರಗಳನ್ನು ಸರ್ಕಾರ ಪರೀಕ್ಷಿಸಲು, ಸುಧಾರಣೆಯ ಸಲಹೆಗಳಿಗೆ ಬಹುಮತವಾದ ವಿರೋಧವಿರುವುದು ಕಂಡುಬಂತು. ಆದ್ದರಿಂದ ಸರ್ಕಾರ ಆ ವಿಷಯದಲ್ಲಿ ಪ್ರವರ್ತಿಸುವುದಿಲ್ಲವೆಂದು ನಿರ್ಧರಿಸಿತು; ಇಂಥ ವಿಷಯಗಳನ್ನು ಕಾಲದ ಪರಿಣಾಮಕಾರಿಯಾದ ಪ್ರಭಾವಗಳಿಗೂ, ವಿದ್ಯಾ ಪ್ರಚಾರದಿಂದ ಜನಗಳ ಮನಸ್ಸಿನಲ್ಲಿ ಉಂಟಾಗುವ ನೈತಿಕ ಬದಲಾವಣೆಗಳಿಗೂ ಬಿಡತಕ್ಕದ್ದೆಂದು ತಿಳಿಯಿತು. ಸುಧಾರಕರಿಗೆ ಇದರಿಂದ ಬಹು ನಿರಾಶೆಯಾಯಿತು. ರಾನಡೆ ಮಾತ್ರ ಈ ವಿಷಯದಲ್ಲಿ ನಡೆದ ದೀರ್ಘ ಚಳವಳಿಯಿಂದಲೂ ತೀಕ್ಷ್ಣವಾದ ಚರ್ಚೆಯಿಂದಲೂ ಜನ ಜಾಗ್ರತಿಯಾದದ್ದು ಒಂದು ಲಾಭವೆಂದು ತಿಳಿದರು.

ಹಿಂದೂ ಸಮಾಜ ಸ್ತ್ರೀಯರ ವಿಷಯದಲ್ಲಿ ಎಸಗಿರುವ ಅನ್ಯಾಯಗಳನ್ನು ಕುರಿತು ರಾನಡೆಯವರ ಮನಸ್ಸು ಕುದಿಯುತ್ತಿತ್ತು. ವಕ್ತೃತ್ವೋತ್ತೇಜಕ ಸಭೆಯ ಆಶ್ರಯದಲ್ಲಿ ೧೮೮೭ರ ಮೇನಲ್ಲಿ ಸ್ತ್ರೀಯರ ಹಕ್ಕುಗಳನ್ನು ಕುರಿತು ಒಂದು ಚರ್ಚೆ ನಡೆಯಿತು. ಭಾಷಣಕಾರರಲ್ಲಿ ಅನೇಕರು ಸ್ತ್ರೀಗುಣವನ್ನು ಹಳಿದು ಸ್ತ್ರೀಯರಿಗೆ ಸ್ವಾತಂತ್ರ್ಯ ಕೊಡುವುದರಿಂದ ವೇದಮೂಲವಾದ ಹಿಂದೂ ಸಮಾಜದಲ್ಲಿ ಕ್ರಾಂತಿಕಾರಿಯಾದ ಬದಲಾವಣೆಗಳಾಗಿ ಅಪಾಯ ಒದಗುವುದೆಂದು ನುಡಿದರು. ಆ ಅಭಿಪ್ರಾಯ ಸಭಿಕರಿಗೂ ಸಮಾಧಾನ ತಂದಂತೆ ತೋರಿತು. ರಾನಡೆ ಅಂದು ಸಭೆಯ ಅಧ್ಯಕ್ಷರಾಗಿದ್ದರು. ರಾಗಾನ್ವಿತರಾಗಿ, ಕಟುವಾಗಿ ಮಾತಾಡುತ್ತ ಅವರು—ಶಿಕ್ಷೆ ಬಂಧನಗಳ ಮೂಲಕ ಮಾತ್ರವೇ ಗಂಡಹೆಂಡಿರನ್ನು ಒಟ್ಟಾಗಿ ಇಡಬಹುದೆಂದೂ, ಎಲ್ಲ ದೋಷಗಳಿಗೂ ಸ್ತ್ರೀಯೇ ಕಾರಣವೆಂದೂ ಅನೇಕರು ಭಾವಿಸಿರುವಂತೆ ತೋರುತ್ತದೆಯೆಂದು ನುಡಿದರು. ಮುಂದುವರಿಯುತ್ತ ಹೀಗೆ ಹೇಳಿದರು: ಮಾಡಿರುವ ಆಪಾದನೆಯೂ ಅದಕ್ಕೆ ಕೊಟ್ಟಿರುವ ಕಾರಣವೂ ಎರಡೂ ತಪ್ಪು. ಶಾಸ್ತ್ರಗಳನ್ನು ಪರಿಶೀಲಿಸಿದರೆ ಪುರಾತನ ಕಾಲದಲ್ಲಿ ಸ್ತ್ರೀಯರಿಗೆ ತಕ್ಕ ರಕ್ಷಣೆಯೂ ಇತ್ತು ಗೌರವವೂ ಇತ್ತು. ಸ್ತ್ರೀಯರ ಮೇಲೆ ಆರೋಪಿಸಿರುವ ದೋಷಗಳನ್ನು ಗಮನಿಸಿದರೆ, ವಾಸ್ತವವಾಗಿ ನಾವು ನಮ್ಮ

ತಾಯಂದಿರನ್ನೂ, ಹೆಣ್ಣು ಮಕ್ಕಳನ್ನೂ, ಅಕ್ಕತಂಗಿಯರನ್ನೂ ಹಳಿಯುತ್ತೇವೆ ಎಂದಾಯಿತು. ಹೀಗೆ ಅವರನ್ನು ಅವಮಾನಿಸುವುದಕ್ಕಿಂತಲೂ ಹೆಚ್ಚಾದ ಕೃತಘ್ನತೆ ಇರಲಾರದು. "ಪ್ರಪಂಚದ ಮೇಲೆಲ್ಲ ನಾನಾ ಜನರು ನಮಗಿಂತ ಹೆಚ್ಚಿನ ಪ್ರಗತಿಯನ್ನು ಸಾಧಿಸಿ ನಮ್ಮನ್ನು ತಿರಸ್ಕರಿಸುತ್ತಿದಾರೆ. ಅದಕ್ಕಾಗಿ ನಾವು ತಲೆ ತಗ್ಗಿಸಬೇಕಾಗಿದೆ. ಆದರೆ ಅದು ಹಾಗಿರಲಿ; ನಮ್ಮ ಮನುಷ್ಯತ್ವದ ಧೈರ್ಯ ಸಾಹಸಗಳೆಲ್ಲ ನಮ್ಮ ಮನೆಯ ಸ್ತ್ರೀಯರ ಮೇಲೆ ಮಾತ್ರ ಪ್ರಯೋಗವಾಗುವುದಾದರೆ ಅದಕ್ಕಿಂತಲೂ ಕ್ಷುದ್ರವಾದುದೇನಿದೆ?" —ಎಂದು ನುಡಿದರು.

ಸಮಾಜ ಸುಧಾರಣೆಗಾಗಿ ರಾನಡೆಯವರು ಎಸಗಿದ ಕಾರ್ಯಗಳಲ್ಲೆಲ್ಲ ಪ್ರಾಯಶಃ ಅವರು ಇಂಡಿಯನ್ ನ್ಯಾಷನಲ್ ಸೋಷಿಯಲ್ ಕಾನ್ಫರೆನ್ಸಿಗೆ ಮಾಡಿದ ಸೇವೆ ಅತ್ಯಂತ ಮಹತ್ತ್ವವಾದದ್ದು. ೧೮೮೫ರಲ್ಲಿ ಬೊಂಬಾಯಲ್ಲಿ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಸಂಸ್ಥೆ ಸ್ಥಾಪನೆಯಾದಾಗ, ದಿವಾನ್ ಬಹಾದುರ್ ಆರ್. ರಘುನಾಥರಾಯರೂ ರಾನಡೆಯವರೂ ಕಾಂಗ್ರೆಸ್ಸಿನ ಮೊದಲನೆಯ ಅಧಿವೇಶನದಲ್ಲಿ ಸಮಾಜ ಸುಧಾರಣೆಯ ವಿಷಯವನ್ನು ಕುರಿತು ಭಾಷಣ ಮಾಡಿದರು. ಸೂಕ್ಷ್ಮ ಪರಿಶೀಲನೆಯ ನಂತರ ಬಹುಮಂದಿ ಮುಂದಾಳುಗಳು ಕಾಂಗ್ರೆಸು ಸಾಮಾಜಿಕ ಪ್ರಶ್ನೆಗಳಲ್ಲಿ ನೇರವಾಗಿ ಭಾಗವಹಿಸುವುದು ವಿಹಿತವಲ್ಲವೆಂದು ತೀರ್ಮಾನಿಸಿದರು. ಸಮಾಜ ಸುಧಾರಣೆಯ ಅಗತ್ಯವನ್ನು ಗಮನಿಸಿದ ಮುಂದಾಳುಗಳು ಆಗ ಇಂಡಿಯನ್ ನ್ಯಾಷನಲ್ ಸೋಷಿಯಲ್ ಕಾನ್‌ಫರೆನ್ಸ್ ಎಂಬ ಹೆಸರಿನಲ್ಲಿ ಬೇರೆ ಚಳವಳಿಯನ್ನು ಆರಂಭಿಸುವುದು ಸೂಕ್ತವೆಂದು ತಿಳಿದರು. ೧೮೮೭ ರ ಡಿಸೆಂಬರಿನಲ್ಲಿ ಮೊದಲನೆಯ ಸಾಮಾಜಿಕ ಸಭೆ ಮದರಾಸಿನಲ್ಲಿ ನಡೆಯಿತು. ರಘುನಾಥರಾವ್ ಮತ್ತು ರಾನಡೆ ಸಭೆಯ ಪ್ರೇರಕ ಶಕ್ತಿಗಳಾಗಿದ್ದರು. ಹಲವು ವರ್ಷ ಕಾಂಗ್ರೆಸ್ ಮಂಡಪದಲ್ಲಿಯೆ, ಕಾಂಗ್ರೆಸ್ ಅಧಿವೇಶನದ ತರುವಾಯವೇ, ಕಾನ್‌ಫರೆನ್ಸ್ ನಡೆಯುತ್ತಿತ್ತು.

ಸಾಮಾಜಿಕ ಅನ್ಯಾಯಗಳನ್ನು ಎದುರಿಸುವುದಕ್ಕಾಗಿ ದೇಶದ ಮೇಲೆಲ್ಲ ಹರಡಿದ್ದ ಸಂಘಗಳ ಪ್ರತಿನಿಧಿಗಳನ್ನು ವರ್ಷಕ್ಕೊಮ್ಮೆ ಒಂದೆಡೆಯಲ್ಲಿ ಸೇರಿಸಿ ಸುಧಾರಣಾ ಶಕ್ತಿಗಳನ್ನು ಪ್ರಚೋದಿಸಿ ಬಲಗೊಳಿಸುವುದು ನ್ಯಾಷನಲ್ ಸೋಷಿಯಲ್ ಕಾನ್ಫರೆನ್ಸಿನ ಉದ್ದೇಶವಾಗಿತ್ತು. ದೇಶದ

ಅನೇಕ ಭಾಗಗಳಲ್ಲಿ ಭವಿಷ್ಯದಲ್ಲಿ ಆಶೆಯನ್ನು ಹುಟ್ಟಿಸುವ ಒಳ್ಳೆಯ ಸಮಾಜ ಸುಧಾರಣೆಯ ಕೆಲಸ ನಡೆಯುತ್ತಿದ್ದಿತು. ಆ ಬಗೆಯ ಕೆಲಸದ ವಿಚಾರ ಕಾನ್ಫರೆನ್ಸಿನಮುಂದೆ ಬಂದಾಗ ಇತರರಿಗೆ ಒಂದು ಮಾದರಿಯಾಗುತ್ತಿತ್ತು. ಕಾನ್ಫರೆನ್ಸು ಸ್ಥಳೀಯ ಸಂಘಗಳನ್ನು ಬಲಗೊಳಿಸಿ, ಅವುಗಳ ಕಾರ್ಯಕ್ರಮಗಳನ್ನು ರೂಪಿಸಿ, ಅವುಗಳ ಸುಧಾರಣೋತ್ಸಾಹಕ್ಕೆ ಸರಿಯಾದ ಮಾರ್ಗದರ್ಶನವನ್ನು ನೀಡುತ್ತಿತ್ತು. ರಾನಡೆ ಈ ಕೆಲಸದಲ್ಲಿ ಅತ್ಯುತ್ಸಾಹವನ್ನೂ ಅಪರಿಮಿತವಾದ ಶ್ರದ್ಧೆಯನ್ನೂ ವಹಿಸಿದರು. ಕಾನ್ಫರೆನ್ಸು ೧೮೮೯ ರಲ್ಲಿ ಕಾರ್ಯೋನ್ಮುಖವಾಯಿತೆಂದು ಹೇಳಬಹುದು. ರಘುನಾಥರಾವ್ ಕಾರ್ಯದರ್ಶಿಯಾಗಿದ್ದರೂ ರಾನಡೆ ಅದರ ಪ್ರೇರಕ ಶಕ್ತಿಯೂ ಮಾರ್ಗದರ್ಶಕ ಅಂಗುಲಿಯೂ ಆಗಿದ್ದರೆನ್ನಬಹುದು. ಪುಣೆಯಲ್ಲಿ ವ್ಯವಸ್ಥಿತವಾದ ಒಂದು ಸಂಸ್ಥೆ ಮೊದಲೆ ಇದ್ದಿತು ; ಅದರ ಮೂಲಕ ೧೮೮೯ರಲ್ಲಿ ೫೪೯ ಮಂದಿ ಸುಧಾರಣೆಯ ಪ್ರತಿಜ್ಞೆಯನ್ನು ಹೊತ್ತರು. ಮಾದಕ ದ್ರವ್ಯಗಳನ್ನು ಸೇವಿಸದಿರುವುದು, ವರದಕ್ಷಿಣೆಯನ್ನು ತೆಗೆದುಕೊಳ್ಳದಿರುವುದು, ವಿಧವಾ ವಿವಾಹವನ್ನು ಒಪ್ಪುವುದು, ಹೆಣ್ಣು ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸುವುದು, ಬಾಲ್ಯವಿವಾಹಗಳನ್ನು ಮಾಡಿಸದಿರುವುದು—ಇವೆಲ್ಲ ಪ್ರತಿಜ್ಞೆಗಳಲ್ಲಿ ಸೇರಿದ್ದವು. ಪುಣೆಯ ಸಂಸ್ಥೆಯಲ್ಲಿ ಇನಾಂದಾರರು, ಜಹಗೀರುದಾರರು, ದಖನ್ನಿನ ರಾಜರುಗಳು ಮೊದಲಾಗಿ ಅನೇಕ ದೊಡ್ಡ ಮನುಷ್ಯರಿದ್ದರು. ಬರೋಡ ಮತ್ತು ಇಂದೂರಿನ ಮಹಾರಾಜರುಗಳು ಸಂಸ್ಥೆಯ ನಿಧಿಗೆ ಹಣವನ್ನು ಕೊಟ್ಟರು. ಹಿಂದುಗಳು ಮುಸಲ್ಮಾನರು ಕ್ರಿಶ್ಚಿಯನ್ನರಾದಿಯಾಗಿ ಅನೇಕರು ಸಂಸ್ಥೆಗೆ ಸೇರಿದರು.

ವರ್ಷವರ್ಷವೂ ಕಾನ್ಫರೆನ್ಸು ದೊಡ್ಡ ನಗರವೊಂದರಲ್ಲಿ ಸೇರಿದಾಗ ರಾನಡೆ ಗತವರ್ಷದಲ್ಲಿ ಸಾಧಿಸಿದ ವಿಷಯಗಳನ್ನು ವಿವರಿಸಿ, ಅಸಹನೆಯೂ ಅತ್ಯುತ್ಸಾಹವೂ ಕಾರ್ಯವನ್ನು ಸಾಧಿಸಿಕೊಡಲಾರವು ಎಂಬ ಎಚ್ಚರಿಕೆಯನ್ನು ನೀಡುತ್ತಿದ್ದರು.

ಕಾನ್ಫರೆನ್ಸಿನ ಭಾಷಣಗಳಲ್ಲಿ ರಾನಡೆ ಸಮಾಜ ಸುಧಾರಣೆಗೆ ಸಂಬಂಧಪಟ್ಟಂತೆ ಅನೇಕ ಸಾಧಾರಣ ತತ್ತ್ವಗಳನ್ನು ಪ್ರತಿಪಾದಿಸುತ್ತಿದ್ದರು. ಉದಾಹರಣೆಗೆ, ದೇಶಾಭಿಮಾನದ ಚಳವಳಿಗಳಲ್ಲಿ ಸಮಾಜ ಸುಧಾರಣೆಯ ಸ್ಥಾನವೇನು, ಎಂಬ ಪ್ರಶ್ನೆ ಇದೆ. ದೇಶಾಭಿಮಾನಿಗಳಾದ ಹಲವರು ಸಮಾಜ ಸುಧಾರಣೆಯಿಂದ ತೊಂದರೆಯುಂಟಾಗುತ್ತದೆಯೆಂದು ಅದನ್ನು

ಹಳಿಯುತ್ತಿದ್ದರು ; ಇನ್ನು ಕೆಲವರು ರಾಜಕೀಯ ಪರಿಸ್ಥಿತಿ ತೃಪ್ತಿಕರವಾಗಿ ಮಾರ್ಪಡುವವರೆಗೆ ಅದು ತಡೆಯಬಹುದೆಂದು ಹೇಳುತ್ತಿದ್ದರು.

ರಾನಡೆಯವರ ಮನಸ್ಸು ಸಮತೂಕದ್ದಾಗಿದ್ದು ವ್ಯಾಪಕವಾಗಿತ್ತು. ಮಾನವಜೀವಿತವನ್ನು ಅವರು ಅಖಂಡವಾಗಿ ಪರಿಶೀಲಿಸುತ್ತಿದ್ದರು. ಖಂಡಶವಾದ ಅಥವಾ ಅತಿರೇಕ ರೀತಿಯ ಬದಲಾವಣೆಗಳು ಅವರಿಗೆ ಒಪ್ಪಿಗೆಯಾಗುತ್ತಿರಲಿಲ್ಲ. ರಾಜಕೀಯದಿಂದ ಸಮಾಜ ಸುಧಾರಣೆಯನ್ನು ಬೇರ್ಪಡಿಸುವುದು ಅಸಾಧ್ಯವೆಂಬುದು ಅವರ ಮತವಾಗಿತ್ತು. ಜೀವನದುದ್ದಕ್ಕೂ ಅವರ ಅಭಿಪ್ರಾಯ ಇದೇ ಆಗಿತ್ತು. ಮೇಲಿಂದ ಮೇಲೆ ಇದನ್ನು ಅವರು ವ್ಯಕ್ತಪಡಿಸಿದ್ದಾರೆ. ತಮ್ಮ ಜೀವಿತದ ಕಡೆಯ ವರ್ಷದಲ್ಲಿ ಈ ಅಭಿಪ್ರಾಯವನ್ನು ಪ್ರಾಯಶಃ ಬಹು ಖಚಿತವಾಗಿ ನಿರೂಪಿಸಿದರು. ಆಗ ಸಾತಾರದಲ್ಲಿ ನಡೆದ ಬೊಂಬಾಯಿ ಪ್ರಾಂತದ ಮೊದಲ ಸಾಮಾಜಿಕ ಸಭೆಯ (Social Conference) ಅಧ್ಯಕ್ಷಪೀಠದಿಂದ ಮಾತಾಡುತ್ತ ಮಾನವ ಚಟುವಟಿಕೆಗಳ ನಾನಾ ಕ್ಷೇತ್ರಗಳು ಒಂದರೊಡನೊಂದು ನಿಕಟವಾಗಿ ಸೇರಿಕೊಂಡಿವೆಯೆಂದೂ ಅವುಗಳನ್ನು ಸಂಪೂರ್ಣವಾಗಿ ಬೇರ್ಪಡಿಸುವುದು ಗುಲಾಬಿಯ ಆಕಾರವನ್ನೂ ಪರಿಮಳವನ್ನೂ ಬೇರ್ಪಡಿಸುವಷ್ಟೆ ಅಸಾಧ್ಯವೆಂದೂ ತಿಳಿಸಿದರು :

ರಾಜಕೀಯ ಹಕ್ಕುಗಳು ಕನಿಷ್ಠ ಪ್ರಮಾಣದಲ್ಲಿರುವಾಗ ಒಳ್ಳೆಯ ಸಮಾಜ ವ್ಯವಸ್ಥೆ ಇರಲಾರದು ; ಹಾಗೆಯೇ ಸಮಾಜದ ವ್ಯವಸ್ಥೆಯಲ್ಲಿ ನ್ಯಾಯ ಧರ್ಮಗಳಿಲ್ಲದಿದ್ದರೆ ರಾಜಕೀಯ ಹಕ್ಕುಗಳನ್ನು ಉಪಯೋಗಿಸಲು ತಕ್ಕ ಅರ್ಹತೆ ಬರಲಾರದು. ಸಾಮಾಜಿಕ ವ್ಯವಸ್ಥೆ ದೋಷಯುತವಾಗಿರುವಾಗ ಒಳ್ಳೆಯ ಆರ್ಥಿಕ ವ್ಯವಸ್ಥೆ ಏರ್ಪಡಲಾರದು. ಧಾರ್ಮಿಕ ಆದರ್ಶಗಳು ಕೀಳಾಗಿ ನಿಕೃಷ್ಟಾವಸ್ಥೆಯಲ್ಲಿ ಇರುವ ಸಮಾಜದಲ್ಲಿ, ಸಾಮಾಜಿಕ ಆರ್ಥಿಕ ರಾಜಕೀಯ ವಲಯಗಳಲ್ಲಿ, ಯಾವ ಸಿದ್ಧಿ ಲಭಿಸೀತು ? ಈ ಬಗೆಯ ಪರಸ್ಪರ ಸಂಬಂಧ ಆಕಸ್ಮಿಕವಾದದ್ದೇನೂ ಅಲ್ಲ, ಅದು ಪ್ರಕೃತಿ ನಿಯಮ. ನಮ್ಮ ದೇಹದೊಳಗಿನ ಅಂಗಗಳು ವಿಕೃತಾವಸ್ಥೆಯಲ್ಲಿದ್ದರೆ ನಮ್ಮ ಕೈಕಾಲುಗಳಲ್ಲಿ ಹೇಗೆ ಬಲ ಬಂದೀತು ? ಮಾನವ ಶರೀರದ ವಿಷಯದಲ್ಲಿ ಸಲ್ಲುವ ನಿಯಮ ಸಮಾಜ ಅಥವಾ ರಾಜ್ಯವೆಂಬ ಮಾನವ ಸಮುದಾಯದ ವಿಷಯದಲ್ಲಿಯೂ ಸಲ್ಲುತ್ತದೆ. ಸಾಮಾಜಿಕ ಮತ್ತು ಆರ್ಥಿಕ ವಿಷಯಗಳಿಂದ ರಾಜಕೀಯವನ್ನು ಬೇರ್ಪಡಿಸುವುದು ತಪ್ಪು ; ಒಂದು ವಲಯದಲ್ಲಿ ಕರ್ತವ್ಯವನ್ನು ಉಪೇಕ್ಷಿಸಿದರೆ ಇನ್ನೊಂದು ವಲಯದಲ್ಲಿ ಅದನ್ನು ಪಾಲಿಸಿದಂತಾವುಗುದಿಲ್ಲ*

---

* ಸಿ. ವೈ. ಚಿಂತಾಮಣಿಯವರು ಸಂಪಾದಿಸಿರುವ ಇಂಡಿಯನ್ ಸೋಷಿಯಲ್ ರೀಫಾರ್ಮ್ ಸಂಪುಟದ ೨ನೆಯ ಭಾಗದ ಪು. ೧೨೬–೧೨೮ ಗಳನ್ನು ನೋಡಿ.

ಹೀಗಿದ್ದಾಗ್ಯೂ ರಾನಡೆಯವರ ಸಮಾಜ ಸುಧಾರಣಾ ಭಾಷಣಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಲ್ಲಿ, ಅವರು ತಮ್ಮ ಸಮಾಜತತ್ತ್ವದಲ್ಲಿ ಮತ ಧರ್ಮಕ್ಕೆ ತಮ್ಮದೇ ಆದ ಒಂದು ರೀತಿಯಲ್ಲಿ ಪ್ರಮುಖಸ್ಥಾನವನ್ನು ಕೊಟ್ಟಿದ್ದರೆಂದು, ಅಥವಾ ಮತಧರ್ಮವು ಆ ಸ್ಥಾನವನ್ನು ಆಕ್ರಮಿಸಿ ಕೊಳ್ಳಲು ಅದನ್ನು ಖಾಲಿಬಿಟ್ಟಿದ್ದರೆಂದು ಹೇಳಬಹುದು. ಧರ್ಮವೇ ಜೀವನ ಬುಗ್ಗೆಯ ಕೇಂದ್ರಸ್ಥಾನವೆಂದು, ಸಮಾಜದ ನಾನಾ ಅಂಗಗಳಿಗೆ ಚೈತನ್ಯವನ್ನು ಹರಿಯಿಸುವ ಜೀವಶಕ್ತಿ ಧರ್ಮದಲ್ಲಿದೆಯೆಂದು, ಅವರು ತಿಳಿದಿದ್ದರೆಂಬುದು ಅವರ ಬರಹಗಳಿಂದ ವ್ಯಕ್ತವಾಗುತ್ತದೆ. ಆಂತರಿಕವಾದ ಆತ್ಮೀಯ ಧರ್ಮವನ್ನು ಕುರಿತು ಅವರು ಪದೇಪದೇ ನುಡಿಯುತ್ತಾರೆ :

ಸುಧಾರಣೆಗೆ ಬೆಂಬಲ ನೀಡಿರೆಂದು ಕೇಳಿದಾಗ ಕೆಲವರು ತಮ್ಮಿಂದ ಹೊರಗಿರುವ ಯಾವದೋ ವಸ್ತುವಿನೊಡನೆ ಸಂಬಂಧ ಬೆಳೆಸಬೇಕೆಂಬಂತೆ ವರ್ತಿಸುತ್ತಾರೆ. ಸುಧಾರಣೆಯಲ್ಲಿ ಆ ರೀತಿಯದೇನೂ ಇಲ್ಲ. ಸುಧಾರಣೆಯಾಗಬೇಕಾದದ್ದು ಅವರ ಸ್ವಭಾವವೇ, ಅವರ ಹೃದಯ ಬುದ್ಧಿ ಆತ್ಮಗಳೇ; ಅವರು ತಮ್ಮ ಪೂರ್ವಾಗ್ರಹಗಳನ್ನೇ ತೊಡೆಯಬೇಕು, ತಮ್ಮ ಮೂಢನಂಬಿಕೆಗಳನ್ನೇ ನಿರ್ಮೂಲ ಮಾಡಬೇಕು, ತಮ್ಮ ಧೈರ್ಯವನ್ನೇ ಬಲಗೊಳಿಸಬೇಕು, ತಮ್ಮ ದೌರ್ಬಲ್ಯಗಳನ್ನೇ ಜಯಿಸಬೇಕು; ಒಂದು ಮಾತಿನಲ್ಲಿ ಅವರು ತಮ್ಮ ಗುಣಶೀಲಗಳನ್ನು ಕಾಲಕ್ಕನುಗುಣವಾಗಿ, ಕಾಲಧರ್ಮಕ್ಕೆ ಸರಿಹೊಂದುವಂತೆ, ರೂಪಿಸಿಕೊಳ್ಳಬೇಕು.*

೧೮೯೭ ರಲ್ಲಿ ಅಮರಾವತಿ ಸಮ್ಮೇಳನದಲ್ಲಿ ಮಾತಾಡುತ್ತ ರಾನಡೆ— ಜನರ ಮನಸ್ಸನ್ನು ಹಲವು ತಪ್ಪು ಅಭಿಪ್ರಾಯಗಳು ಆಕ್ರಮಿಸಿರುವುದೇ ಇಂಡಿಯಾದೇಶದ ತೊಂದರೆಗಳಿಗೆಲ್ಲ ಮೂಲಕಾರಣವೆಂದು ವಾದಿಸಿದರು :

ಕಳೆದ ಮೂರು ಸಾವಿರ ವರ್ಷಗಳಿಂದ ನಮ್ಮನ್ನು ಹೀನಸ್ಥಿತಿಗಿಳಿಯುತ್ತಿರುವ ಆಂತರಿಕವಾದ ಸ್ಥಿತಿಗಳು ಅಥವಾ ಭಾವನೆಗಳು ಯಾವುವು ? ಸಂಗ್ರಹವಾಗಿ ಹೇಳುವುದಾದರೆ,— ಪ್ರತ್ಯೇಕತೆ, ಅಂತಃಸಾಕ್ಷಿಗಿಂತ ಹೆಚ್ಚಾಗಿ ಹೊರಶಕ್ತಿಗೆ ತಲೆಬಾಗುವಿಕೆ, ಹುಟ್ಟನ್ನೂ ವಂಶವನ್ನೂ ಪ್ರಧಾನವಾಗೆಣಿಸಿ ಸ್ತ್ರೀಪುರುಷರಲ್ಲಿ ಕೃತಕ ಭೇದಗಳನ್ನು ಒಡ್ಡುವಿಕೆ, ದುಷ್ಕರ್ಮಗಳನ್ನು ಕಂಡೂ ತೆಪ್ಪನಿರುವಿಕೆ, ಎಲ್ಲಕ್ಕೂ ಅದೃಷ್ಟವೇ ಕಾರಣವೆಂದು ಐಹಿಕ ಕ್ಷೇಮ ವಿಚಾರಗಳಲ್ಲಿ ಉದಾಸೀನತೆ,— ಈ ಭಾವನೆಗಳು ನಮ್ಮನ್ನು ಹೀನಸ್ಥಿತಿಗೆ ತಂದಿವೆ. ಇವುಗಳೇ ನಮ್ಮ ಪುರಾತನ ಸಾಮಾಜಿಕ ವ್ಯವಸ್ಥೆಯ ಬೀಜಭಾವನೆಗಳಾಗಿವೆ. ಅವುಗಳ ಪರಿಣಾಮವಾಗಿ—

---

* ೧೮೯೧ ರಲ್ಲಿ ನಾಗಪುರ ಸಮ್ಮೇಳನದ ಸಂದರ್ಭದಲ್ಲಿ ಹಿಸ್ಲಾಪ್ ಕಾಲೇಜಿನಲ್ಲಿ ಮಾಡಿದ ಭಾಷಣದಿಂದ.

ಸ್ತ್ರೀ ಪುರುಷನಿಗೆ ಸಂಪೂರ್ಣವಾಗಿ ಅಡಿಯಾಳಾಗಿರುವುದೂ, ಕೆಳವರ್ಗಗಳವರು ಮೇಲ್ವರ್ಗದವರಿಗೆ ಅಧೀನರಾಗಿರುವುದೂ ನಮ್ಮ ಸಮಾಜದ ಸ್ಥಿತಿಯಾಗಿದೆ. ಅದರಿಂದ, ಮಾನವತೆಯಲ್ಲಿ ಮರ್ಯಾದೆಯೇ ತಪ್ಪಿದೆ.

ಈ ದೋಷಗಳನ್ನು ನಿರ್ಮೂಲ ಮಾಡಬೇಕಾದರೆ, ಹಳೆಯ ಭಾವನೆಗಳನ್ನು ಬದಲಾಯಿಸಬೇಕು, ನೂತನಾದರ್ಶಗಳಿಗೆ ಗೌರವವನ್ನು ಸಲ್ಲಿಸಬೇಕು :

ನಮ್ಮಲ್ಲಿ ಅನೇಕರಿಗೆ ಒಂದು ವಿಷಯ ಪೂರ್ವದಲ್ಲಿ ಯಾರೊ ಹಾಗೆ ಹೇಳಿರುವುದರಿಂದ ಸತ್ಯ ಅಥವಾ ಮಿಥ್ಯ, ಪುಣ್ಯ ಅಥವಾ ಪಾಪ. ಧರ್ಮಕರ್ಮಗಳು ನಾವು ಹಾಗೆ ತಿಳಿದಿರುವುದರಿಂದ ಧರ್ಮಕರ್ಮಗಳಲ್ಲ, ಪ್ರಾಜ್ಞರೆಂದು ಎನಿಸಿಕೊಂಡಿರುವವರು ಯಾರೋ ಹಾಗೆ ವಿಧಿಸಿರುವುದರಿಂದ ಅವು ನಮಗೆ ಧರ್ಮಕರ್ಮಗಳು.... ಅಸಹಾಯರಾಗಿ ಪರರ ತೀರ್ಮಾನಕ್ಕೆ ನಾವು ಒಳಗಾದ ಮೇಲೆ, ಜೀವನದ ಎಲ್ಲ ಕ್ಷೇತ್ರಗಳಲ್ಲೂ ನಾವು ಮಕ್ಕಳಂತೆ ಅಸಹಾಯರಾಗಿಯೇ ಉಳಿಯುವುದರಲ್ಲಿ ಆಶ್ಚರ್ಯವೇನು ?

ನೂತನ ಭಾವನೆ ಎಲ್ಲ ಅಧಿಕಾರವನ್ನು ಕಿತ್ತೊಗೆಯುವ ಕ್ರಾಂತಿಕಾರಕ ಭಾವವಾಗಿರಬೇಕಾದದ್ದಿಲ್ಲ. ಅದು ನಮ್ಮಲ್ಲಿ ಅಂತಸ್ಥವಾಗಿರುವ ದೈವವಾಣಿಗೆ ಹೊಣೆಯಾಗಿರುವ ಸ್ವಾತಂತ್ರ್ಯವಾಗಿರತಕ್ಕದ್ದು. " ಎಲ್ಲ ಮಾನವ ಅಧಿಕಾರಕ್ಕೂ ಮರ್ಯಾದೆಯನ್ನು ಸಲ್ಲಿಸಿ. ಎಲ್ಲ ಪ್ರವಾದಿಗಳಿಗೂ ಎಲ್ಲ ಧರ್ಮಗಳಿಗೂ ಗೌರವವನ್ನು ಕೊಡಿ. ಆದರೆ ಈ ಗೌರವ ನಿಮ್ಮಲ್ಲಿ ಅಂತಸ್ಥವಾಗಿರುವ ದೈವವಾಣಿಗೆ, ನಿಮ್ಮ ಅಂತರ್ವಾಣಿಗೆ, ಅಡ್ಡಿಯಾಗದಿರಲಿ " ಎಂದು ರಾನಡೆ ಹೇಳುತ್ತಾರೆ. ಅವರು ಯಾವಾಗಲೂ ಅಂತರ್ದೃಷ್ಟಿಯನ್ನು ಒತ್ತಿ ಹೇಳುತ್ತಾರೆ.

೧೮೯೬ ರಲ್ಲಿ ಮದರಾಸಿನಲ್ಲಿ ಮಾತಾಡುತ್ತ ಅವರು " ಜನಗಳು ಆ ಸುಧಾರಣೆ ಈ ಸುಧಾರಣೆಯೆಂದು ಚರ್ಚಿಸುವ ವಿಷಯ ನಿಜವಾಗಿ ಅಷ್ಟು ಮುಖ್ಯವಾದ ಪ್ರಶ್ನೆಯಲ್ಲ. ನಮ್ಮ ಮನಸ್ಸನ್ನು ಆಕ್ರಮಿಸಿ ನಮ್ಮ ಹೃದಯವನ್ನು ಬೆಳಗಬೇಕಾದ ಒಂದು ಸರ್ವ ಸಾಧಾರಣವಾದ ನ್ಯಾಯ, ಧರ್ಮ, ಸಮತೆ, ಸಹನೆ, ಪರಿಶುದ್ಧತೆ, ಕರುಣೆ ಇವುಗಳ ವ್ಯಾಪ್ತಿ ಮುಖ್ಯ. ಸರ್ವರಲ್ಲೂ ನ್ಯಾಯ ಧರ್ಮ ಕರುಣೆ ಸಹನೆ ಗುಣಗ್ರಹಣ ಇವು ಬೇಕೆ, ಅಥವಾ ಪ್ರತ್ಯೇಕತೆ, ಗರ್ವ, ದರ್ಪ, ಕ್ರೌರ್ಯ, ನಾನಾ ವಿಧವಾದ ಸಂಕಟ ಇವು ಬೇಕೆ ? ಯಾವುದು ಬೇಕೋ ಅದನ್ನು ಆರಿಸಿಕೊಳ್ಳುವ ಹಕ್ಕು ನಮ್ಮದಾಗಿದೆ, ಆ ವಿಚಕ್ಷಣೆಯೂ ನಮ್ಮದೇ " ಎಂದು ನುಡಿದರು.

ಸಮಾಜ ಸುಧಾರಣೆಗೆ ಯಾವ ಮಾರ್ಗವನ್ನು ಅನುಸರಿಸಬೇಕು ಎಂಬುದು ಮುಖ್ಯವಾದ ಆದರೆ ಚರ್ಚಾಸ್ಪದವಾದ ವಿಷಯ. ಸಮಾಜ ಸುಧಾರಣೆಯನ್ನು ಸಾಧಿಸಲು ನಾಲ್ಕು ಪ್ರಮುಖ ಮಾರ್ಗಗಳಿವೆ: (೧) ಸಾಂಪ್ರದಾಯಿಕ ಮಾರ್ಗ, (೨) ಅಂತರ್ವಾಣಿಯ ಮಾರ್ಗ, (೩) ಶಾಸನದ ಮಾರ್ಗ ಮತ್ತು (೪) ಕ್ರಾಂತಿಯ ಮಾರ್ಗ. ಕಡೆಯದೊಂದನ್ನು ಹೊರತಾಗಿ ಉಳಿದ ಮಾರ್ಗಗಳನ್ನು ರಾನಡೆ ಉಪಯೋಗಿಸಿದರು. ಕ್ರಾಂತಿ ಮಾರ್ಗದ ಗುಣಗಳನ್ನು ರಾನಡೆ ಅರಿತಿರಲಿಲ್ಲವೆಂದಲ್ಲ, ಆದರೆ ಆ ಮಾರ್ಗದಲ್ಲಿ ಅವಗುಣಗಳು ಹೆಚ್ಚಾಗಿರುವುದರಿಂದ ಅದನ್ನು ಬಿಟ್ಟರು. ಅದು ಚಾರಿತ್ರಿಕವಾದ ಸಂಬಂಧಗಳನ್ನು ಕಡಿದು ಹಾಕುತ್ತದೆ; ಅಲ್ಲದೆ ನೇಮಿಷ್ಠರಲ್ಲಿ ಅನಾವಶ್ಯಕವಾಗಿ ವಿರೋಧ ಮನೋಭಾವವನ್ನು ಉಂಟುಮಾಡುತ್ತದೆ. ಆದ್ದರಿಂದ "ಇತರ ಮಾರ್ಗಗಳಲ್ಲಿ ನನಗೆ ಹೆಚ್ಚು ನಂಬಿಕೆ" ಎಂದು ರಾನಡೆ ಹೇಳಿದರು.

ಪೂರ್ವದಿಂದಲೂ ಬಂದ ಸಂಬಂಧಗಳನ್ನು ಪೂರ್ಣವಾಗಿ ಕಡಿದು ಹಾಕಲು ಇಷ್ಟವಿಲ್ಲದೆ ರಾನಡೆ ಸಾಂಪ್ರದಾಯಿಕ ಮಾರ್ಗವನ್ನು ಹೆಚ್ಚಾಗಿ ಅನುಸರಿಸಿದರು. ಈ ವಿಷಯಕವಾದ ಸಾಹಿತ್ಯಕ್ಕೆ ಅವರು ಅರ್ಪಿಸಿದ ಎರಡು ಕಾಣಿಕೆಗಳು ಗಮನಾರ್ಹವಾಗಿವೆ. ಅವುಗಳಲ್ಲಿ ಒಂದು ಲೇಖನ—"ವಿಧವಾ ವಿವಾಹಕ್ಕೆ ವೇದಗಳ ಆಧಾರ"—ಸುಮಾರು ೧೮೭೦ರಲ್ಲಿ ಬರೆದದ್ದು. ಈ ಲೇಖನ ರಾನಡೆಯವರು ಇಂಥ ಚರ್ಚೆಗಳಲ್ಲಿ ತೋರುತ್ತಿದ್ದ ಧಾರ್ಮಿಕೋತ್ಸಾಹ, ವಿವೇಚನೆಯಿಂದ ಕೂಡಿದ ಎಚ್ಚರಿಕೆ, ಸಂಶೋಧನಾ ಶ್ರಮ,—ಇವುಗಳಿಗೆ ಒಳ್ಳೆಯ ಉದಾಹರಣೆಯಾಗಿದೆ:—

ಪುನರ್ವಿವಾಹ ವಾದಿಗಳು ಸ್ತ್ರೀಯು ತನ್ನ ಪತಿಯ ಮರಣಾನಂತರ ಗತಿಸಿದ ಪತಿಯ ವಿಷಯದಲ್ಲಿ ಒಂದೇ ಸಮನಾದ ನಿಷ್ಠೆಯಿಂದ ನಡೆದುಕೊಳ್ಳಬೇಕಾಗಿಲ್ಲವೆಂದು ಹೇಳುವುದಿಲ್ಲ. ಆ ಬಗೆಯ ಧೀರ ತ್ಯಾಗ ಅಪೂರ್ವವಾದ ಪುಣ್ಯದಿಂದ ಕೂಡಿದ್ದೆಂದು ಅವರು ಸುಲಭವಾಗಿ ಒಪ್ಪುತ್ತಾರೆ. ಆದರೆ ಈ ಬಗೆಯ ಜೀವನವನ್ನು ನಡಸಲಾರದ ಸ್ತ್ರೀ,—ಎಂದರೆ ಚಿಕ್ಕ ಹುಡುಗಿಯಾಗಿರುವಾಗ, ತನ್ನ ಗಂಡನು ಯಾರೆಂಬುದು ತಿಳಿಯುವುದಕ್ಕೆ ಮೊದಲೇ, ಹೆಂಡತಿಯಾಗಿ ತನ್ನ ಕರ್ತವ್ಯಗಳೇನೆಂಬುದು ತಿಳಿಯುವುದಕ್ಕೆ ಮೊದಲೇ ಗಂಡನನ್ನು ಕಳೆದುಕೊಂಡವಳು—ಸಹಜವಾಗಿ ಅಂಥವಳು—ಭಕ್ತಿಯಿಂದ ನಡೆಯಲಾರಳು. ಅಂಥ ಸ್ತ್ರೀಯರ ಪರವಾಗಿ ಈ ಸುಧಾರಣೆ ಅಗತ್ಯವಾದದ್ದು. ಅಂಥ ಸ್ತ್ರೀಯು ಮನು ವಿಧಿಸಿರುವಂತೆ ಭಕ್ತಿಯಿಂದ ನಡೆಯಬೇಕೆನ್ನುವುದು ಎಲ್ಲ ಧರ್ಮ ನ್ಯಾಯಗಳ ಅವಹೇಳನವಾಗುತ್ತದೆ.

ಧರ್ಮಶಾಸ್ತ್ರಗಳನ್ನು ಪರಿಕ್ಷಿಸಿ ಈ ರೀತಿ ವಿವೇಚಿಸಿದ್ದಾರೆ :

ಹೀಗೆ, ವೇದಗಳಲ್ಲಿ ಸ್ಪಷ್ಟವಾದ ಅನುಮತಿಯಿದೆ; ಎಲ್ಲ ಯುಗಗಳಿಗೂ ಅನ್ವಯಿಸುವಂಥ ಸ್ಮೃತಿಗಳಲ್ಲಿ ಸ್ಪಷ್ಟವಾದ ಅನುಮತಿಯಿದೆ; ಕಲಿಯುಗಕ್ಕೆ ಅನ್ವಯವಾಗುವ ವಿಶೇಷ ಧರ್ಮದಲ್ಲಿಯೂ ಸ್ಪಷ್ಟವಾದ ಅನುಮತಿಯಿದೆ; ನಿಷೇಧ ವಚನಗಳು ಬಹುಮಟ್ಟಿಗೆ ಸಾಮಾನ್ಯ ರೀತಿಯಲ್ಲಿದ್ದು ಅಸ್ಪಷ್ಟವಾಗಿವೆ; ಅವು ನಿಷೇಧಿಸುವ ಬದಲು ಶಾಸ್ತ್ರ ಪ್ರಕಾರ ಪುನರ್ವಿವಾಹವಾಗಬಹುದಾದ ಸಂದರ್ಭಗಳನ್ನು ಪರಿಮಿತಗೊಳಿಸುತ್ತವೆ.

ರಾನಡೆಯವರು ಬರೆದ ಇನ್ನೊಂದು ಲೇಖನ "ಬಾಲ್ಯವಿವಾಹವನ್ನು ಕುರಿತು ಧರ್ಮಶಾಸ್ತ್ರಗಳು." ಅದನ್ನು ೧೮೮೮ ರಲ್ಲಿ ದಯಾರಾಂ ಗಿಡೂಮಲ್‌ರ "ಭಾರತದಲ್ಲಿ ಸ್ತ್ರೀಯರ ಸ್ಥಾನ" ಎಂಬ ಗ್ರಂಥಕ್ಕಾಗಿ ಬರೆದರು. ಮರುವರ್ಷ ಆ ಲೇಖನ ಸಾರ್ವಜನಿಕ ಸಭಾದ ಪತ್ರಿಕೆಯಲ್ಲಿ "ಹಿಂದು ವಿವಾಹ ಪದ್ಧತಿಯನ್ನು ಕುರಿತು ಸೂತ್ರಗಳ ಮತ್ತು ಸ್ಮೃತಿಗಳ ವಿಧಿಗಳು" ಎಂಬ ಶಿರೋನಾಮೆಯಿಂದ ಪ್ರಕಟವಾಯಿತು. ಆ ಲೇಖನದಲ್ಲಿ ರಾನಡೆಯವರು ಹಿಂದು ಸಮಾಜದಲ್ಲಿ ಸ್ತ್ರೀಯರ ಸ್ಥಾನ ಹೇಗೆ ಅವನತಿ ಹೊಂದುತ್ತ ಬಂದಿತೆಂಬುದನ್ನು ವಿವರಿಸುತ್ತಾರೆ. ಸೂತ್ರಗಳ ಕಾಲದಲ್ಲಿ ಪ್ರೌಢ ವಿವಾಹವೂ ವಿಧವಾ ವಿವಾಹವೂ ಸಾಮಾನ್ಯ ಪದ್ಧತಿಯಾಗಿದ್ದವು; ಏಕಪತ್ನೀವ್ರತ ಸಾಮಾನ್ಯ ನಿಯಮವಾಗಿತ್ತು; ಸ್ತ್ರೀ ವಿದ್ಯಾಭ್ಯಾಸ ಪ್ರಚುರವಾಗಿತ್ತು; ಸ್ತ್ರೀಯರಿಗೆ ಸಮಾಜದಲ್ಲಿ ಗೌರವವೂ ಸ್ವಾತಂತ್ರ್ಯವೂ ಇದ್ದವು. ಕ್ರಮೇಣ ಇವೆಲ್ಲ ನಾಶವಾಗಿ ಧರ್ಮದ ಹೆಸರಿನಲ್ಲಿ ಬಾಲ್ಯವಿವಾಹ ಶಿಶುವಿವಾಹ ಪದ್ಧತಿಗಳು ಆಚರಣೆಗೆ ಬಂದವು; ಪುನರ್ವಿವಾಹ ನಿಷೇಧಿಸಲ್ಪಟ್ಟಿತು; ಏಕಪತ್ನೀವ್ರತದ ಕಟ್ಟು ಸಡಿಲವಾಯಿತು; ಸ್ತ್ರೀಯರಿಗೆ ವೇದಾಧಿಕಾರ ತಪ್ಪಿತು; ಅವರು ಮೊದಲು ತಂದೆಯ, ಆಮೇಲೆ ಗಂಡನ, ಕಡೆಯಲ್ಲಿ ಮಗನ ಅಧೀನಕ್ಕೊಳಗಾಗಿ ಜೀವಾವಧಿ ದಾಸ್ಯಕ್ಕೆ ಒಳಗಾದರು. ಸ್ಮೃತಿಕಾರರ ಅಭಿಪ್ರಾಯಗಳನ್ನೆಲ್ಲ ಪರೀಕ್ಷಿಸಿ ರಾನಡೆ ಈ ರೀತಿ ನುಡಿಯುತ್ತಾರೆ :

ಸುಧಾರಕರು ಪ್ರಸಕ್ತ ಕಾಲದ ಕಳಂಕಗಳನ್ನು ಬಿಟ್ಟು ಪುರಾತನ ಸ್ಮೃತಿಗಳ ಅರ್ಥವನ್ನು ಗ್ರಹಿಸಬೇಕೆನ್ನುತ್ತಾರೆ. ಪ್ರತೀಕಾರ ಮನೋಭಾವವೆಲ್ಲ ಅಡಗಿದ ಮೇಲೆ, ಈಗ ಆಚರಣೆಯಲ್ಲಿರುವ ಪದ್ಧತಿಗಳಿಗೆ ಅಂಟಿಕೊಳ್ಳುವುದರಿಂದ ತಾವು ತಮ್ಮ ಕರ್ತವ್ಯಗಳನ್ನೂ ವಿಹಿತಕರ್ಮಗಳನ್ನೂ ಅಲಕ್ಷಿಸಿ, ಶಾಸ್ತ್ರ ನಿಯಮಗಳನ್ನೆಲ್ಲ ಮೀರಿ, ಅತ್ಯುತ್ತಮ ಸಂಪ್ರದಾಯಗಳಿಗೆ ವಿರೋಧವಾಗಿ ನಡೆಯುತ್ತಿರುವುದಾಗಿ ಜನ ಭಾವಿಸಬಹುದೆಂದು ಆಶಿಸಬಹುದು. ಪೂರ್ವ ಸಂಪ್ರದಾಯಗಳಿಗೆ

ಬದಲಾಯಿಸಿ ಎಂದು ಹೇಳುವಾಗ ಸುಧಾರಕರು ಕ್ರಾಂತಿಯನ್ನು ಬೋಧಿಸುತ್ತಿಲ್ಲ. ಸಮಾಜದ ಶರೀರದಲ್ಲಿ ಕೂಡಿಕೊಂಡಿರುವ ಹೊಲಸನ್ನು ತೆಗೆದು ಹಾಕಿ ಅದಕ್ಕೆ ಚೈತನ್ಯ ವನ್ನೂ ವೀರ್ಯವನ್ನೂ ಒದಗಿಸಿ ಎಂದು ಹೇಳುತ್ತಿದ್ದಾರೆ.

ವಿಷಯವನ್ನು ನೇರವಾಗಿ ಮನುಷ್ಯನ ನ್ಯಾಯಾನ್ಯಾಯ ವಿವೇಚನಾ ಬುದ್ಧಿಗೆ ತರುವ 'ಅಂತರ್ವಾಣಿ' ಮಾರ್ಗವನ್ನು ರಾನಡೆ ಬಹುವಾಗಿ ಪ್ರಯೋಗಿಸುತ್ತಿದ್ದರು. "ದೈವವಾಣಿಯೊಂದಕ್ಕೆ ಮಾತ್ರವೇ ನಾವು ಕಿವಿಗೊಡ ಬೇಕೆ"ಂದು ಹೇಳುತ್ತಿದ್ದರು. "ಆದರೆ ನಾವು ಇಷ್ಟಪಡುವಾಗಲೆಲ್ಲ ಅದು ನಮಗೆಲ್ಲ ಕೇಳಿಸದು; ಯಾಕೆಂದರೆ ದೀರ್ಘಕಾಲದ ಅಲಕ್ಷ್ಯದಿಂದಲೂ ಪರಾವಲಂಬನದಿಂದಲೂ ಅಂತಸ್ಥವಾಗಿರುವ ಈ ವಾಣಿಗೆ ಜಡ್ಡು ಹಿಡಿದಿರು ತ್ತದೆ." ಎಂದೂ ಎಚ್ಚರಿಸುತ್ತಿದ್ದರು. ಈ ಪದ್ಧತಿಗೆ ಅನುಸಾರವಾಗಿಯೇ ಸುಧಾರಕರು ಸ್ತ್ರೀ ವಿದ್ಯಾಭ್ಯಾಸ ಪ್ರಚಾರ, ವಿಧವಾ ವಿವಾಹ, ಮಾದಕ ದ್ರವಗಳ ವರ್ಜನೆ, ಬಾಲ್ಯವಿವಾಹ ಪದ್ಧತಿ ನಿರ್ಮೂಲನ, ಮೊದಲಾದ ವಿಷಯಗಳಲ್ಲಿ ಪ್ರತಿಜ್ಞೆ ಕೈಕೊಂಡು ಆತ್ಮಶಕ್ತಿಯನ್ನು ವರ್ಧಿಸಿಕೊಳ್ಳುತ್ತಿ ದ್ದರು.

ಸುಧಾರಣೆಗಳನ್ನು ಜಾತಿಕಟ್ಟಳೆಯ ಪ್ರಕಾರ ಅಥವಾ ರಾಜ್ಯದ ಶಾಸ ನದ ಮೂಲಕ ಬಲಾತ್ಕಾರವಾಗಿ ಪ್ರಯೋಗಿಸುವುದು ಶಾಸನದ ಮಾರ್ಗ. ಇದು "ತಿಳಿವಳಿಕೆ ಇಲ್ಲದವರ ಹಿತಕ್ಕಾಗಿ ತಿಳಿದವರು ಉಪಯೋಗಿಸುವ ಬಲ. ಇದರಲ್ಲಿ ಗುಣವೂ ಇದೆ ಅವಗುಣವೂ ಇದೆ. ಮೊದಲಿನ ಎರಡು ಮಾರ್ಗಗಳು ಯಶಸ್ವಿಯಾಗದಿರುವ ಸಂದರ್ಭಗಳಲ್ಲಿ ಮಾತ್ರ ಇದನ್ನು ಅನುಸರಿಸಬೇಕು. ಇದು ಬಲಾತ್ಕಾರದ ಮಾರ್ಗವಾದ್ದರಿಂದ, ಬೇರೆ ಮಾರ್ಗಗಳನ್ನು ಪ್ರಯೋಗಿಸುವವರೆಗೂ ಇದನ್ನು ಅನುಸರಿಸಬಾರದು." ಎಂದು ರಾನಡೆ ೧೮೯೧ ರ ನಾಗಪುರದ ಭಾಷಣದಲ್ಲಿ ತಿಳಿಸಿದರು.

ಸಮ್ಮತಿಯ ವಯಸ್ಸಿನ ಮಸೂದೆಯ ವಿಚಾರದಲ್ಲಿ ನಡೆದ ಚರ್ಚೆ ಯಲ್ಲಿ ಶಾಸನದ ಮೂಲಕ ಸುಧಾರಣೆಗಳನ್ನು ಜಾರಿಗೆ ತರುವ ಮಾರ್ಗ ತೀಕ್ಷ್ಣವಾದ ಖಂಡನ ಮಂಡನಗಳಿಗೆ ಒಳಗಾಯಿತು. ಸಮ್ಮತಿಯ ವಯಸ್ಸನ್ನು ಹೆಚ್ಚಿಸುವ ವಿಷಯದಲ್ಲಿ ರಾನಡೆ ಸರಕಾರದ ಸಹಾಯವನ್ನು ಪಡೆಯುವ ನೀತಿಯನ್ನು ಸಮರ್ಥಿಸಿದರು. ನಿಷ್ಠಾವಂತರಾದವರು ಅದನ್ನು ವಿರೋಧಿಸಿದರು. ಅದೇನೂ ಆಶ್ಚರ್ಯವಲ್ಲ. ಬಾಳಗಂಗಾಧರ ಟಿಳಕರ

ಮುಂದಾಳುತನದಲ್ಲಿ ಪ್ರಾಧಾನ್ಯಕ್ಕೆ ಬರುತ್ತಿದ್ದ ಹೊಸ ಪಕ್ಷವೂ ಅದನ್ನು ಎದುರಿಸಿತು. ಟಿಳಕರು ಸಮಾಜ ಸುಧಾರಣೆಗೆ ವಿರೋಧವಾಗಿರಲಿಲ್ಲ. ಆದರೆ ರಾಷ್ಟ್ರದ ವಿಶಾಲ ಹಿತದೃಷ್ಟಿಯಿಂದ, ಸಮಾಜದಲ್ಲಿ ಸುಧಾರಣೆಯಿಂದುಂಟಾಗುವ ಒಡಕನ್ನು ತಪ್ಪಿಸಿ, ಜನರಲ್ಲಿ ದೇಶದ ಧಾರ್ಮಿಕ ಸಾಮಾಜಿಕ ಸಂಸ್ಥೆಗಳ ವಿಷಯದಲ್ಲಿ ಅಭಿಮಾನವನ್ನೂ ಗೌರವವನ್ನೂ ಉಂಟುಮಾಡಬೇಕೆಂಬುದು ಅವರ ಅಭಿಪ್ರಾಯವಾಗಿತ್ತು. ಸುಧಾರಣೆಯ ವಿಷಯಗಳಲ್ಲಿ ಸರಕಾರ ಪ್ರವೇಶಿಸುವುದನ್ನು ಅವರು ತೀವ್ರವಾಗಿ ವಿರೋಧಿಸುತ್ತಿದ್ದರು. ಯಾಕೆಂದರೆ ಸುಧಾರಣೆ ಪರಿಣಾಮಕಾರಿಯಾಗಬೇಕಾದರೆ ಅದು ಜನರ ಮನಸ್ಸಿನಲ್ಲಿ ಹುಟ್ಟಿ ಬರಬೇಕೆಂಬುದು ಅವರ ಅಭಿಪ್ರಾಯವಾಗಿತ್ತು.

ಇದಕ್ಕೆ ರಾನಡೆಯವರ ಉತ್ತರವೇನೆಂಬುದನ್ನು ೧೮೮೫ ರಲ್ಲಿ ಅವರು ಮಾಡಿದ "ಸಾಮಾಜಿಕ ವಿಚಾರಗಳಲ್ಲಿ ರಾಷ್ಟ್ರಶಾಸನ" ವೆಂಬ ಭಾಷಣದಿಂದ ಗ್ರಹಿಸಬಹುದು.

ರಾಷ್ಟ್ರ ತನ್ನ ಸಮಷ್ಟಿ ರೂಪದಲ್ಲಿ ತನ್ನ ಶ್ರೇಷ್ಠ ಪ್ರಜಾಜನರ ಶಕ್ತಿ ಪ್ರಜ್ಞೆ ದಯೆ ಧರ್ಮಗಳನ್ನು ಪ್ರತಿನಿಧಿಸುತ್ತದೆ. ಒಬ್ಬ ಮನುಷ್ಯ ಅಥವಾ ಹಲವು ಜನರ ಸಮುದಾಯ ಸ್ವಂತ ಜವಾಬ್ದಾರಿಯಿಂದ ನಿರ್ವಹಿಸಬಹುದಾದ ಕೆಲಸವನ್ನು ರಾಷ್ಟ್ರ ಮಾಡದಿರಬಹುದು ಆದರೆ ರಾಷ್ಟ್ರವು ಖಾಸಗಿಯಾದ ಯಾವ ಜನಸಮುದಾಯವೂ ಸರಿಯಾಗಿ ತಡೆಯಲಾರದ ಕೆಡುಕುಗಳನ್ನು ತಡೆಯಬಹುದಾದರೆ, ಅಥವಾ ಆ ಜನಸಮುದಾಯಕ್ಕಿಂತ ಶೀಘ್ರವಾಗಿಯೂ ಪರಿಣಾಮಕಾರಿಯಾಗಿಯೂ ತಡೆಯಬಹುದಾದರೆ ಆಗ ಅದು ತನ್ನ ಕರ್ತವ್ಯವನ್ನು ನಿರ್ಲಕ್ಷಿಸಲಾರದು.

ವಿದೇಶೀ ಸರಕಾರ ನಮ್ಮ ಸಾಮಾಜಿಕ ವ್ಯವಹಾರಗಳಲ್ಲಿ ಪ್ರವೇಶಿಸಕೂಡದೆಂಬ ವಾದಕ್ಕೆ ಉತ್ತರವಾಗಿ ಅವರು—ಅದು ಸರಿಯಾದ ವಾದವೇ; ಸರಕಾರ ತಮ್ಮ ಜವಾಬ್ದಾರಿಯಮೇಲೆಯೇ ಸಾಮಾಜಿಕ ಶಾಸನಗಳನ್ನು ತಂದರೆ ಅದನ್ನು ಯಾರೂ ಸಮರ್ಥಿಸಲಾರರು. ಆದರೆ ವಾಸ್ತವವಾಗಿ, ಸಾಮಾಜಿಕ ಶಾಸನಗಳ ವಿಷಯದಲ್ಲಿ ಆರಂಭ ನಮ್ಮದೇ ಆಗಿರುತ್ತದೆ. ನಮ್ಮ ಜನರಲ್ಲಿ ಹೆಚ್ಚು ಪ್ರಾತಿನಿಧಿಕರೂ ಸುಶಿಕ್ಷಿತರೂ ಆದ ವರ್ಗ, ನಮ್ಮ ಪುರಾತನ ಪೂಜ್ಯ ಸಂಪ್ರದಾಯಗಳನ್ನು ಲಕ್ಷಿಸಿ, ಸುಧಾರಣೆಗಳನ್ನು ಸೂಚಿಸುತ್ತದೆ. ಸರಕಾರವೇನಿದ್ದರೂ ಅಂಥ ಮರ್ಯಾದಸ್ಥವರ್ಗದವರ ಸಲಹೆಗೆ ಶಾಸನದ ಗೌರವವನ್ನೂ ಶಿಕ್ಷಾ ಶಕ್ತಿಯನ್ನೂ ಕೊಡುತ್ತದೆ.—ಎಂದು ತಿಳಿಸಿದರು.

ಸಮಾಜ ಅಂತಃಶಕ್ತಿಯಿಂದ ಬೆಳೆಯಬೇಕೇ ಹೊರತು ವಿದೇಶೀ

ಆದರ್ಶಗಳ ನೇರಕ್ಕೆ ಅದನ್ನು ಎಳೆಯುವುದರಿಂದ ವರ್ಧಿಸಲಾರದೆಂಬ ವಾದಕ್ಕೆ ಉತ್ತರವಾಗಿ—ಸುಧಾರಣೆಗಳ ಹೆಸರಿನಲ್ಲಿ ಹೊಸತೇನನ್ನೂ ತರಲು ಪ್ರಯತ್ನಿಸುತ್ತಿಲ್ಲ; ಸಮಾಜದ ಪೂರ್ವ ವೈಭವವನ್ನು ಸ್ಥಾಪಿಸಲು ಯತ್ನಿಸುತ್ತಿದ್ದೇವೆ ಅಷ್ಟೆ. ಈ ನಡುವೆ ಉಂಟಾದ ಸಮಾಜದ ಅವನತಿ ಸಮಾಜ ಇಚ್ಛಿಸಿ ಆದದ್ದಲ್ಲ. ಕ್ರೂರ ವಿಜೇತರ ಅಸಂಸ್ಕೃತ ಪ್ರಭಾವಗಳ ಹೊರೆಯಿಂದ ನಮ್ಮ ಸಮಾಜ ಈಗಿನ ಗತಿಗೆ ಇಳಿದಿದೆ. ನಮ್ಮ ಪೂರ್ವದ ವೈಭವೋನ್ನತಿಗಳಿಗೆ ನಾವು ಏರಬೇಕಾದರೆ, ಹಿಂದಿನ ಕ್ರಮಗಳನ್ನು ಅನುಸರಿಸಲೇ ಬೇಕು.—ಎಂದು ನುಡಿದರು.

ಪಕ್ಕಾ ಅಪರಾಧಗಳನ್ನು ಅಡಗಿಸಲು ಮಾತ್ರವೇ ಕಾನೂನನ್ನು ಆಶ್ರಯಿಸತಕ್ಕದ್ದು; ಸಾಮಾಜಿಕ ಶಾಸನಗಳ ಹೆಸರಿನಲ್ಲಿ ಪರಿಹರಿಸಲು ಉದ್ಯುಕ್ತವಾಗಿರುವ ಕೆಡುಕುಗಳು ಅಪರಾಧಗಳಲ್ಲ ಎಂಬ ವಾದಕ್ಕೆ ಉತ್ತರವಾಗಿ ಹೀಗೆ ವಾದಿಸಿದರು.

**ಬಲಾತ್ಕಾರ ವಿಧವಾ ಪದ್ಧತಿಯೂ, ಸ್ತ್ರೀಯನ್ನು ವಿರೂಪಗೊಳಿಸುವುದೂ, ಒಬ್ಬಳಿಗಿಂತ ಹೆಚ್ಚಿನ ಸಂಖ್ಯೆಯ ಹೆಂಡತಿಯರನ್ನು ಕಟ್ಟಿಕೊಂಡು ಸಂಸಾರದ ಪಾವಿತ್ರ್ಯವನ್ನು ಹಾಳುಮಾಡುವುದೂ, ಬಾಲ್ಯವಿವಾಹದ ಅವಿವೇಕವೂ, ಬಹುಮಟ್ಟಿಗೆ, ಮನಸ್ಸಿನ ಒಂದು ಭರದಲ್ಲಿ ಮಾಡುವ ಕೆಲಸಗಳಾಗಿಲ್ಲ; ಕ್ರೂರತನದಿಂದ ಮಾಡುವ ಆಚರಣೆಗಳಾಗಿವೆ. ಅವುಗಳನ್ನು ಎಸಗತಕ್ಕವರು ಸುಖವಾಗಿಯೇ ಇರುತ್ತಾರೆ, ಆದರೆ ಈ ಕೆಡುಕುಗಳಿಗೆ ಬಲಿಯಾಗುವ ಅಸಹಾಯರಾದ ಪ್ರಾಣಿಗಳು ಜೀವಾವಧಿ ಅನರ್ಹವಾದ ದುಃಖವನ್ನು ಅನುಭವಿಸುತ್ತಾರೆ. ಅಧಾರ್ಮಿಕವಾದ ಈ ಹೇಯ ಕೃತ್ಯಗಳು ಅಪರಿಹಾರ್ಯವಾದ ಅನ್ಯಾಯಗಳಾಗಿವೆ. ರಾಷ್ಟ್ರದ ಈ ಅಪರಾಧದ ಹೊಣೆಗೆ ತಡೆಯೇ ಇಲ್ಲವಾಗಿದೆ.**

೧೮೯೧ ರ ಆದಿಯಲ್ಲಿ ಸಮ್ಮತಿಯ ವಯಸ್ಸಿನ ಮಸೂದೆಯ ವಿಚಾರವಾಗಿ, ಆಗ ಅದು ವರಿಷ್ಠ ಶಾಸನ ಸಭೆಯ ಮುಂದೆ ಇದ್ದುದರಿಂದ, ಬಹು ಬಿರುಸಾದ ವಾಗ್ವಾದಗಳು ನಡೆಯುತ್ತಿದ್ದುವು. ಆ ಪ್ರಕ್ಷುಬ್ಧ ದಿನಗಳಲ್ಲಿ ರಾನಡೆ ನಗರ ಜಿಲ್ಲೆಯಲ್ಲಿ ಸಂಚಾರ ಮಾಡುತ್ತಿದ್ದರು. ಅಹ್ಮದ್ ನಗರದಲ್ಲಿ ಸಮ್ಮತಿಯ ವಯಸ್ಸನ್ನು ಕುರಿತು ಸಾರ್ವಜನಿಕ ಭಾಷಣವನ್ನು ಇತ್ತರು. ನಗರದಿಂದ ಸೋಲಾಪುರಕ್ಕೆ ವರ್ಗವಾಗಿ ಹೋದರು. ಅಲ್ಲಿ ಕಾಲರ ತಗುಲಿ ಮೃತ್ಯುವಿಗೆ ಬಲಿಯಾಗುವುದರಲ್ಲಿದ್ದರು. ಗುಣಮುಖರಾದ ಮೇಲೆ ಪುಣೆಗೆ ಬಂದರು. ಆ ವೇಳೆಗೆ ಮಸೂದೆ ಕಾನೂನಾಗಿತ್ತು.

೧೮೯೦ ರ ಅಕ್ಟೋಬರ್ ೪ ರಲ್ಲಿ ಪಾಂಚ್ ಹೌಡ್ಸ್ ಮಿಷನ್ ಸಂಸ್ಥೆಯಲ್ಲಿ ಟೀ ಸತ್ಕಾರ ಕೂಟವೊಂದು ಏರ್ಪಾಡಾಗಿತ್ತು. ಅದರಲ್ಲಿ ರಾನಡೆಯೂ ಸೇರಿ ೫೨ ಮಂದಿ ಬ್ರಾಹ್ಮಣರು ಭಾಗವಹಿಸಿದ್ದರು. ಟೀ ಬಿಸ್ಕತ್ತುಗಳನ್ನು ಅಲ್ಲಿ ಅನೇಕರು ಸೇವಿಸಿದರು. ರಾನಡೆ ಸತ್ಕಾರ ಕೂಟದ ಯಜಮಾನನಿಗೆ ಮರ್ಯಾದೆ ತೋರಿಸುವುದಕ್ಕಾಗಿ ಟೀಯನ್ನು ಸ್ವೀಕರಿಸಿದರು, ಆದರೆ ಸೇವಿಸಲಿಲ್ಲ.

ಈ ಸಂಗತಿ ನಡೆದ ಆರು ತಿಂಗಳವರೆಗೆ ಅದರ ವಿಚಾರವಾಗಿ ಎಲ್ಲಿಯೂ ಮಾತು ಏಳಲಿಲ್ಲ. ಆ ನಂತರ ಸಮಾಜ ಸುಧಾರಣಾ ವಿರೋಧಿಯೊಬ್ಬನು ಟೀ ಕೂಟದಲ್ಲಿ ನಡೆದ ಸಂಗತಿಗಳನ್ನು ವಿವರಿಸಿ ಪತ್ರಿಕೆಯಲ್ಲಿ ಬರೆದನು. ಅದಾದ ಕೊಂಚ ದಿನಗಳಲ್ಲಿ ರಾನಡೆ ಯೂರೋಪಿನಿಂದ ಹಿಂದಿರುಗಿದ ಸ್ನೇಹಿತರೊಬ್ಬರ ಗೌರವಾರ್ಥವಾಗಿ ಭೋಜನವನ್ನು ಏರ್ಪಡಿಸಿದ್ದರು. ಆ ಸಮಾರಂಭದಲ್ಲಿ ಮೂವರು ಬ್ರಾಹ್ಮಣೇತರ ಮಿತ್ರರಿದ್ದರು. ಆ ಸಂಗತಿಯೂ ಪತ್ರಿಕೆಯಲ್ಲಿ ವರದಿಯಾಯಿತು. ಪುಣೆಯ ಆಚಾರವಂತರು, ಮಿಷನರಿ ಟೀಯಲ್ಲಿ ಭಾಗವಹಿಸಿದವರನ್ನು ಬಹಿಷ್ಕರಿಸಬೇಕೆಂದು ಒತ್ತಾಯಪಡಿಸಲಾರಂಭಿಸಿದರು. ಟೀಯಲ್ಲಿ ಭಾಗವಹಿಸಿದವರ ಮನೆಯಲ್ಲಿನ ಶುಭಾಶುಭ ಸಂದರ್ಭಗಳಿಗೆ ಪುರೋಹಿತರು ದೊರೆಯದಾದರು. ರಾನಡೆಯವರಿಗೇನೂ—ಅಧಿಕಾರ ಸ್ಥಾನದಲ್ಲಿ ಇದ್ದುದರಿಂದ — ಹೆಚ್ಚು ತೊಂದರೆಯಾಗಲಿಲ್ಲ. ಆದರೆ ಇತರರು ಸಂಕಟಕ್ಕೊಳಗಾದರು.

ಮಠಾಧಿಪತಿಗಳು ೧೮೯೨ ರಲ್ಲಿ ಇಬ್ಬರು ಶಾಸ್ತ್ರಿಗಳನ್ನು ರಾನಡೆಯವರಲ್ಲಿಗೆ ಕಳಿಸಿದರು. ಆತ್ಮಗೌರವಕ್ಕೆ ಕುಂದುಬಾರದ ರೀತಿಯಲ್ಲಿ ನಡಸುವುದಾದರೆ ತಮ್ಮ ಪಕ್ಷ ಪ್ರಾಯಶ್ಚಿತ್ತವನ್ನು ಒಪ್ಪಿಕೊಳ್ಳುವುದಾಗಿ ರಾನಡೆ ತಿಳಿಸಿದರು. ಶಾಸ್ತ್ರಿಗಳು ಅದಕ್ಕೆ ಸಮ್ಮತಿ ಸೂಚಿಸಿ ಪ್ರಾಯಶ್ಚಿತ್ತದ ನಂತರ ರಾನಡೆಯ ಪಕ್ಷದವರನ್ನೆಲ್ಲ ಜಾತಿಗೆ ತೆಗೆದುಕೊಳ್ಳುವುದಾಗಿ ಹೇಳಿದರು.

ರಾನಡೆಯವರಿಗೆ ಪ್ರಾಯಶ್ಚಿತ್ತದ ಅಗತ್ಯವೇನೂ ಇರಲಿಲ್ಲ. ಆದರೆ ಹಲವರು ಕಷ್ಟಕ್ಕೊಳಗಾಗಿದ್ದುದು ಅವರಿಗೆ ತಿಳಿದಿತ್ತು. ಆದ್ದರಿಂದ ಅವರವರ ಅಗತ್ಯಕ್ಕೆ ತಕ್ಕಂತೆ ಪ್ರಾಯಶ್ಚಿತ್ತವನ್ನು ನಡಸಬಹುದು ಅಥವಾ ಬಿಡಬಹುದೆಂದು ತೀರ್ಮಾನಿಸಿದರು. ರಾನಡೆಯವರು ಪ್ರಾಯಶ್ಚಿತ್ತವನ್ನು ನಡಸದಿದ್ದರೆ ತಾವು ನಡಸುವುದು ಸಂಗತವಾಗುವುದಿಲ್ಲವೆಂದು ಅವರ

ಸ್ನೇಹಿತರು ತಿಳಿಸಿದರು. ನಿರ್ವಾಹವಿಲ್ಲದೆ ರಾನಡೆ (೧೮೭೨ ರ ನೋ ೧೫ ರಲ್ಲಿ) ಲೋಣಾವಳಾದಿಂದ ಪುಣೆಗೆ ಹೋಗಿ ಪ್ರಾಯಶ್ಚಿತ್ತವನ್ನು ನಡಸಿ ಬಂದರು.

ಅಲ್ಲಿಂದ ಒಂದು ತಿಂಗಳ ಕಾಲ ಭಾರತೀಯ ಮತ್ತು ಆಂಗ್ಲೋ ಇಂಡಿಯನ್ ಪತ್ರಿಕೆಗಳು ರಾನಡೆಯವರ ನಡತೆಯನ್ನು ಬಿಡದೆ ಖಂಡಿಸಿದರು. ಅವರ ತಾರುಣ್ಯದ ಧೈರ್ಯೋತ್ಸಾಹಗಳು ಕುಗ್ಗಿರುವುವೆಂದೂ ಸುಧಾರಣಾ ಚಳವಳಿ ಅವರಿಂದ ಮುರಿದು ಬಿತ್ತೆಂದೂ ಹಳಿದರು. ರಾನಡೆ ತಮ್ಮ ನಡತೆಯನ್ನು ಸಮರ್ಥಿಸಿ ಪತ್ರಿಕೆಗೆ ಪತ್ರ ಬರೆದರು.

ಸ್ನೇಹಿತರಿಗಾಗಿ ರಾನಡೆ ಪ್ರಾಯಶ್ಚಿತ್ತ ಕಾರ್ಯವನ್ನು ನಡಸಬೇಕಾಯಿತು. ಅವರು ಅದಕ್ಕೆ ಒಪ್ಪದಿದ್ದರೆ, ಅವರ ಸ್ನೇಹಿತರೂ ಒಪ್ಪುತ್ತಿರಲಿಲ್ಲ. ಅದರಿಂದ ಅವರಿಗೆಲ್ಲ ನಿರಂತರವಾದ ದುಃಖವೂ ತೊಂದರೆಯೂ ಉಂಟಾಗುತ್ತಿದ್ದುವು. ಸ್ನೇಹಿತರಿಗಾಗಿ ತೋರಿದ ನಿಃಸ್ವಾರ್ಥ ನಡತೆಯಿಂದ ರಾನಡೆಯವರಿಗೆ ಸಾರ್ವಜನಿಕವಾದ ಅಪಖ್ಯಾತಿ ದೊರೆಯಿತು. ಅವರು ಅದನ್ನು ಮೌನವಾಗಿ ಸಹಿಸಿದರು. ಆ ಕಾಲದಲ್ಲಿ ಅವರ ಹೆಂಡತಿ ಕೂಡ ಅವರನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಿಲ್ಲ. ತಾವು ದೊಡ್ಡ ತಪ್ಪು ಮಾಡಿರುವುದಾಗಿ ಎರಡು ಮೂರು ದಿನಗಳ ಕಾಲ ಭಾವಿಸಿಕೊಂಡರು. ರಾನಡೆ ಪ್ರಾಯಶ್ಚಿತ್ತ ಮಾಡುವುದಕ್ಕಾಗಿ ಹೊರಟಾಗ ಅವರ ವಿಷಯದಲ್ಲಿ ತಮ್ಮ ಮನಸ್ಸು ಎಷ್ಟು ಅಸಮಾಧಾನದಿಂದ ಕೂಡಿತ್ತೆಂಬುದನ್ನು ರಾನಡೆಯವರ ಪತ್ನಿ ತಮ್ಮ "ನೆನಪುಗಳಲ್ಲಿ" ತಿಳಿಸಿದ್ದಾರೆ. ಪ್ರಾಯಶ್ಚಿತ್ತದ ಅವಮಾನದಲ್ಲಿ ಇವರೇಕೆ ಸಿಕ್ಕಿಹಾಕಿಕೊಳ್ಳಬೇಕು? ಯಾರಿಗೆ ತೊಂದರೆಯಾಗಿತ್ತೊ ಅವರು ಅದನ್ನು ನಡಸಿಕೊಳ್ಳಲು ಬಿಡಲಿ ಎಂದು ರಮಾಬಾಯಿಯವರ ಭಾವನೆ. ರಾನಡೆ ಸಂಜೆ ರೈಲಿನಿಂದ ಹಿಂದಿರುಗಿದಾಗ ರಮಾಬಾಯಿ ಅವರ ಹತ್ತಿರ ಹೋಗಲಿಲ್ಲ. ಕೋಣೆಯಲ್ಲಿ ಇಣಿಕಿ ನೋಡಿದಾಗ ರಾನಡೆ ತಮ್ಮ ನಿತ್ಯದ ಪತ್ರ ಪತ್ರಿಕೆಗಳಲ್ಲಿ—ಎಂದಿನಂತೆ ನಿರತರಾಗಿದ್ದರು. ತಮ್ಮ ಕರ್ತವ್ಯವೇನೆಂಬುದನ್ನು ನಿರ್ಧರಿಸಿ ಅದರಂತೆ ಎಸಗಿದ್ದರು, ಅದರಮೇಲೆ ಎಂದಿನಂತೆ ಶಾಂತಚಿತ್ತದಿಂದ ಇದ್ದರು. ಮಿತ್ರರ ಮತ್ತು ಶತ್ರುಗಳ ಖಂಡನೆಗಳು ಬಹು ತೀಕ್ಷ್ಣವಾಗಿದ್ದರೂ ಅವರ ಚಿತ್ತದ ಶಾಂತತೆ ಕದಲಲಿಲ್ಲ.

ಈ ಸಂದರ್ಭದಲ್ಲಿ ರಾನಡೆಯವರ ನಡತೆಯನ್ನು ಕುರಿತು ಯೋಚಿಸು

ವುದು ಆವಶ್ಯಕವಾಗುತ್ತದೆ. ಅವರು ವಿರೋಧಿಸುವುದರ ಬದಲು ಪ್ರಾಯಶ್ಚಿತ್ತಕ್ಕೆ ಒಪ್ಪಿ ತಾವೂ ಅದನ್ನು ನಡಸಿದ್ದು ಸರಿಯೆ? "ನನಗೆ ತೋರುವ ಸತ್ಯವನ್ನು ಒಪ್ಪುವಂತೆ ನಿಮ್ಮನ್ನು ಒಪ್ಪಿಸಲಾರೆ, ಆದ್ದರಿಂದ ನೀವು ಸರಿಯೆನ್ನುವ ಅಸತ್ಯವನ್ನೇ ಒಪ್ಪುವಂತೆ ನಟಸುತ್ತೇನೆ"* ಎಂದ ಹಾಗಾಯಿತಲ್ಲವೆ ರಾನಡೆಯವರ ನಡತೆ? ಇದಕ್ಕೆ ಉತ್ತರ ನಿರ್ಣಯಿಸುವ ಮೊದಲು ರಾನಡೆಯವರ ಸ್ವಭಾವವನ್ನು ಅರಿತುಕೊಳ್ಳಬೇಕು. ಅವರಿಗೆ ದಂಗೆಯ ಅಥವಾ ಕ್ರಾಂತಿಯ ಮಾರ್ಗ ಸ್ವಲ್ಪವೂ ಸೇರದು. ಅಶಿಕ್ಷಿತವಾದ, ಅವ್ಯವಸ್ಥಿತವಾದ, ಚಿಕ್ಕ ಸುಧಾರಣಾ ಸೇನೆಯೊಂದನ್ನು ಶತ್ರು ಪ್ರಾಂತದ ಮೂಲಕ ನಡಸಿಕೊಂಡು ಹೋಗುವ ಸೇನಾನಿಯಂತೆ ಆಗಿತ್ತು ಅವರ ಸ್ಥಿತಿ. ಸುಮಾರು ೫೦ ವರ್ಷಗಳ ಹಿಂದೆ ಆರಂಭವಾದ ಪಾಶ್ಚಾತ್ಯ ಶಿಕ್ಷಣದಿಂದ ಶಿಕ್ಷಣ ಹೊಂದಿದ ಭಾರತೀಯರು ತಮ್ಮ ಸಮಾಜದ ಶರೀರದಲ್ಲಿ ನಾನಾ ದೋಷಗಳನ್ನು ಕಾಣಲಾರಂಭಿಸಿದರು. ಪಾಶ್ಚಾತ್ಯ ಭಾವನೆಗಳನ್ನೂ ಜೀವನ ರೀತಿಗಳನ್ನೂ ಬಹುವಾಗಿ ಮೆಚ್ಚಿಕೊಂಡು ಭಾರತೀಯವಾದದ್ದನ್ನೆಲ್ಲ ತಿರಸ್ಕರಿಸಲಾರಂಭಿಸಿದರು. ಪಾಶ್ಚಾತ್ಯ ಶಿಕ್ಷಣಕ್ಕೆ ಒಳಗಾದವರು ಅಲ್ಪ ಮಂದಿ, ಒಳಗಾಗದ ಜನ ಅಪಾರ ಮಂದಿ. ಈ ಅಪಾರಮಂದಿ ಅಲ್ಪ ಮಂದಿಯ ನಡತೆಯನ್ನು ಕಂಡು ತಲ್ಲಣಿಸಿದರು. ಆತ್ಮರಕ್ಷಣೆಯ ಅಗತ್ಯವೂ ಕುಲಾಭಿಮಾನವೂ ಪ್ರತೀಕಾರ ಭಾವವನ್ನು ಉಂಟುಮಾಡಿದವು. ಇದರ ಪರಿಣಾಮವಾಗಿ ಎಲ್ಲ ಸುಧಾರಣೆಯೂ ಅಧಾರ್ಮಿಕವೆಂದು ಗಣಿಸಲ್ಪಟ್ಟಿತು. ಸಾಮಾಜಿಕ ದೋಷಗಳನ್ನು ಎತ್ತಿ ಆಡುವವರು ತೊಂದರೆಗೂ ಕಿರುಕುಳಕ್ಕೂ ಒಳಗಾದರು. ಬಹುಜನರ ಕಲ್ಪನೆಯಲ್ಲಿ "ಸುಧಾರಕ" ಎಂಬ ಮಾತು ಕೆಡುಕಿಗೆ ಪರ್ಯಾಯವಾಗಿ ತೋರಿತು. ಹೀಗೆ ಸಮಾಜ ಸುಧಾರಣೆಗೆ ಅವಕಾಶವಿಲ್ಲದಂತಾದಾಗ ರಾನಡೆ ಅದನ್ನು ವಿನಾಶದಿಂದ ರಕ್ಷಿಸಿದರು.

ಪ್ರೊ|| ಪಟವರ್ಧನ್ ಹೇಳುವಂತೆ ರಾನಡೆ ಸುಮಾರು ೨೦-೩೦ ವರ್ಷಗಳ ಕಾಲ ಸುಧಾರಣಾ ಚಳವಳಿಯ ಜೀವಾಳವಾಗಿದ್ದರು........ ಚಳವಳಿಯನ್ನು ಹೊಸದಾಗಿ ರೂಪಿಸಿ ಅದನ್ನು ಹಳಿಯದರೊಡನೆ, ಎಂದರೆ ನಮ್ಮ

* ಜಾನ್ ಮಾರ್ಲೆಯವರ "On Compromise" ಎಂಬ ಗ್ರಂಥದ ಒಂದು ನುಡಿ.

ಪುರಾತನ ಸಂಪ್ರದಾಯದಲ್ಲಿ ಅಮೂಲ್ಯವಾದದ್ದೂ ಉದಾರವಾದದ್ದೂ ಯಾವುದಿದೆಯೊ ಅದರೊಡನೆ, ಸಮನ್ವಯಗೊಳಿಸಿದರು. ಸಂಸ್ಕೃತಿ ಅವಿಚ್ಛಿನ್ನವಾಗಿ ನಡೆಯುವಂತೆ ವ್ಯವಸ್ಥೆ ಮಾಡಿದರು....ಕ್ರಾಂತಿ ಕ್ರಮವಾದ ಬೆಳವಣಿಗೆಗೆ ದಾರಿ ಮಾಡಿಕೊಟ್ಟಿತು.

ರಾನಡೆ ತೆಲಂಗರಿಗೆ ಬರೆದ ಒಂದು ಪತ್ರದಲ್ಲಿ "ಕೆಲವು ವಿಚಾರಗಳಲ್ಲಿ ನಾವು ಎದುರಿಸಿ ನಿಲ್ಲಬೇಕು; ಆದರೆ ಎದುರಿಸುವುದಕ್ಕಾಗಿಯೇ ಎಲ್ಲ ವಿಚಾರಗಳಲ್ಲಿಯೂ ವಿರೋಧಿಸಿ ನಿಲ್ಲಲು ಕಾರಣವಿಲ್ಲ" ಎಂದು ನುಡಿದಿದಾರೆ. ವಿರೋಧಿಸಬೇಕಾದ ಆವಶ್ಯಕತೆ ಇಲ್ಲವೆಂದು ತಿಳಿದರೆಂದು ತಿಳಿದು ಪ್ರಾಯಶ್ಚಿತ್ತದ ವಿಷಯವನ್ನು ಅಲ್ಲಿಗೇ ಬಿಟ್ಟುಬಿಡಬಹುದಲ್ಲವೆ? ರಾನಡೆ ಆ ಸಂದರ್ಭದಲ್ಲಿ ತಗ್ಗಿ ನಡೆದದ್ದು ಅವರ ಗುಣದಲ್ಲಿ ಒಂದು ಕೋಮಲತೆಯನ್ನು ಅಥವಾ ಅಗತ್ಯವಾದ ಒಂದು ದೃಢತೆಯ ರಾಹಿತ್ಯವನ್ನು ಸೂಚಿಸುತ್ತದೆಯಲ್ಲವೆ? ಸುಧಾರಣೆಯ ವಿಷಯದಲ್ಲಿ ಉತ್ಸಾಹಶಾಲಿಯಾಗಿ ಪ್ರಾಮಾಣಿಕರಾಗಿದ್ದರೂ ಅವರಲ್ಲಿ ಸ್ವಭಾವತಃ ಆತ್ಮಪ್ರತಿಷ್ಠಾಪನೆಯ ಮತ್ತು ಕ್ರಾಂತಿಯ ಮನೋಭಾವವಿರಲಿಲ್ಲ. ಹೆಚ್ಚಾಗಿ ಘರ್ಷಣೆಯಲ್ಲದ ಮಾರ್ಗದಿಂದ ಉದಾತ್ತವಾದ ಗುರಿಯನ್ನು ಮುಟ್ಟಲು ಹವಣಿಸುತ್ತಿದ್ದರು. ವಿಧವೆಯರ ವಿಷಯದಲ್ಲಿ ತೀವ್ರವಾದ ಅನುಕಂಪವಿದ್ದರೂ ತಂದೆಯ ಮನಸ್ಸಿಗೆ ವಿರೋಧವಾಗಿ ನಡೆಯಲಾರದಾದರು. ದೊಡ್ಡ ಸುಧಾರಕರಾದರೂ, ಗುರಿಯ ಸಾಧನೆಯಲ್ಲಿ ಒದಗುವ ತಾತ್ಕಾಲಿಕವಾದ ದುಃಖಗಳನ್ನೆಲ್ಲ ಮೆಟ್ಟಿ ನಿಲ್ಲುವ ಕಠೋರ ಸ್ವಭಾವವಿರಲಿಲ್ಲ. "ನನಗಿಂತ ಹೆಚ್ಚಾಗಿ ತಂದೆಯನ್ನೂ ತಾಯಿಯನ್ನೂ ಪ್ರೀತಿಸುವವನು ನನ್ನನ್ನು ಹೊಂದಲು ಅರ್ಹನಲ್ಲ" ಎಂಬ ಸೆಂಟ್ ಮ್ಯಾಥ್ಯೂನ ವಚನವನ್ನು ಇಲ್ಲಿ ನೆನೆಯಬಹುದು. ರಾನಡೆ ತೀರ ಎಚ್ಚರಿಕೆಯಿಂದ ನಡೆಯುವ ಸ್ವಭಾವದವರು. "ಅಸಾಧ್ಯವೆಂಬುದನ್ನು ಸಾಧ್ಯವೆಂದು ತನ್ನ ನಡತೆಯಲ್ಲೇ ಆಚರಿಸಿ ತೋರಿಸುವುದು ಸುಧಾರಕನ ಕರ್ತವ್ಯ" ಎಂಬ ಗಾಂಧಿಜೀಯವರ ವಚನವನ್ನು ಪಾಲಿಸಲು ಅಗತ್ಯವಾದ ಕ್ರಾಂತಿಯ ಮನೋಭಾವ ರಾನಡೆಯಲ್ಲಿ ಸಾಕಷ್ಟು ಮಟ್ಟಿಗೆ ಇರಲಿಲ್ಲ. ಈ ನ್ಯೂನತೆ ಕಂಡುಬಂದರೂ, ಭಾರತದಲ್ಲಿ ಸಮಾಜ ಸುಧಾರಣೆಯ ವಿಷಯದಲ್ಲಿ ರಾನಡೆಯವರ ಸೇವೆ ಅಪಾರವಾಗಿದೆ. ಅವರ ಕಾರ್ಯದ ಜಾಣ್ಮೆಯನ್ನು ಅದರ ಪರಿಣಾಮ ಸಮರ್ಥಿಸುತ್ತದೆ.

## ೮. ರಾಜನೀತಿಜ್ಞ

ರಾನಡೆಯವರು ೧೯ ನೆಯ ಶತಕದ ಕಡೆಯ ೨೫ ವರ್ಷಗಳಲ್ಲಿ ಭಾರತದ ಅನೇಕ ರಾಜಕೀಯ ಚಳವಳಿಗಳಿಗೆ ಸ್ಫೂರ್ತಿಯನ್ನು ಬೀರಿದ ಪ್ರಭಾವಶಾಲಿಯಾದ ವ್ಯಕ್ತಿ. "೧೮೮೫ ರ ಡಿಸೆಂಬರ್ ೨೮ ರ ಬೆಳಗ್ಗೆ ತಮ್ಮ ದೇಶದ ಭವಿಷ್ಯವನ್ನು ನಿರ್ಧರಿಸಲು ಸೇರಿದ ಎಪ್ಪತ್ತೆರಡುಮಂದಿ ಸಜ್ಜನರಲ್ಲಿ, ಪ್ರಾಜ್ಞರಲ್ಲಿ, ರಾನಡೆಯೂ ಸೇರಿದ್ದರು. ಆಗ ಜನ್ಮವೆತ್ತಿದ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ಸು ರಾಷ್ಟ್ರದಲ್ಲಿ ಜಾಗೃತಿಯನ್ನುಂಟುಮಾಡಿ ರಾಷ್ಟ್ರೀಯ ಚಳವಳಿಗೆ ಮಾರ್ಗದರ್ಶನ ನೀಡಲು ಒಳ್ಳೆ ಸಾಧನವಾಯಿತು. ಎ. ಓ. ಹ್ಯೂಮ್ ಎಂಬಾತನನ್ನು ಕಾಂಗ್ರೆಸ್ಸಿನ ಜನಕನೆಂದು ಕರೆಯುತ್ತಾರೆ. ಹ್ಯೂಮ್ ರಾನಡೆಯನ್ನು ತನ್ನ "ರಾಜಕೀಯ ಗುರು" ವೆಂದು ಹೇಳಿಕೊಳ್ಳುತ್ತಿದ್ದನು. ರಾನಡೆ ತಮ್ಮ ತೂಕವಾದ ಮತ್ತು ತಿಳಿವಳಿಕೆಯಿಂದ ಕೂಡಿದ ನುಡಿಗಳಿಂದ ಭಾವ ಪ್ರಚೋದನೆ ಮಾಡುತ್ತಿದ್ದರು. ದೇಶೀಯ ಪ್ರೆಸ್ ಕಾನೂನು, ಆಯುಧಗಳ ಕಾನೂನು, ಸಿವಿಲ್ ಸರ್ವಿಸ್ ಪರೀಕ್ಷೆಗಳು, ಮಧ್ಯ ಏಷ್ಯಾದ ಪ್ರಶ್ನೆ—ಇವೇ ಮೊದಲಾದ ಉಗ್ರ ರಾಜಕೀಯ ವಿಚಾರಗಳಲ್ಲಿ ಜನಾಭಿಪ್ರಾಯವನ್ನು ರೂಪಿಸುತ್ತಿದ್ದರು. ನಾನಾ ಬಗೆಯ ರಾಜಕೀಯ ಮುಂದಾಳುಗಳು ಅವರ ಸಲಹೆಗಳಿಗಾಗಿ ಅರಸಿಕೊಂಡು ಬರುತ್ತಿದ್ದರು.

ಪಾರ್ಲಿಮೆಂಟಿನಮೇಲೆ ಒತ್ತಾಯ ಹಾಕುವುದರಿಂದ ಅನೇಕ ರಾಜಕೀಯ ವಿಷಯಗಳನ್ನು ಬಗೆಹರಿಸಬಹುದೆಂದು ರಾನಡೆ ತಿಳಿದಿದ್ದರು. ಆ ರೀತಿಯಲ್ಲಿ ನಡೆದು ಪ್ರೆಸ್ ಕಾನೂನಿನಲ್ಲಿ ಬದಲಾವಣೆಗಳನ್ನೂ ಆಫ್ಘನ್ ಯುದ್ಧದ ಖರ್ಚುಗಳ ತೃಪ್ತಿಕರವಾದ ತೀರ್ಮಾನವನ್ನೂ ಸಾಧಿಸಲಾಗಿತ್ತು. ಹೆಚ್ಚು ಅಧಿಕಾರಗಳನ್ನು ಹೊಂದಲು ಇರುವ ಸಾಧನಗಳನ್ನೆಲ್ಲ ಉಪಯೋಗಿಸಿಕೊಳ್ಳಬೇಕೆಂದು ರಾನಡೆ ಹೇಳುತ್ತಿದ್ದರು. ಭಾರತ ರಾಷ್ಟ್ರೀಯರು ಬ್ರಿಟಿಷ್ ಲಿಬರಲ್ ಪಕ್ಷದವರೊಡನೆ ಸಂಪರ್ಕ ಬೆಳಸಿ ಅವರ ಮೂಲಕ ಇಂಡಿಯದ ಕುಂದು ಕೊರತೆಗಳನ್ನು ಬ್ರಿಟಿಷ್ ಪಾರ್ಲಿಮೆಂಟಿನ ಮುಂದೆ ನಿವೇದಿಸಬೇಕೆಂಬುದು ರಾನಡೆಯವರ ಸಲಹೆಯಾಗಿತ್ತು. ಈ ಸಲಹೆಗೆ

ಅನುಸಾರವಾಗಿಯೇ ಅವರು ೧೮೬೭ ರಲ್ಲಿ ಹೆನ್ರಿ ಫಾಸೆಟ್‌ನ ಉಮೇದುವಾರಿಕೆಗೆ ಬೆಂಬಲ ನೀಡಲು ಧನಸಂಗ್ರಹ ಮಾಡಿದರು. ಫಾಸೆಟ್ ಪಾರ್ಲಿಮೆಂಟಿನಲ್ಲಿ ಇಂಡಿಯದ ಪರ ಬಹು ಸಹಾಯಕನಾದ ಸದಸ್ಯನಾಗಿದ್ದನು. ಬ್ರಿಟಿಷ್ ಚುನಾವಣೆದಾರರ ಗಮನಕ್ಕೆ ಇಂಡಿಯದ ಪರಿಸ್ಥಿತಿಯನ್ನು ತರುವುದಕ್ಕಾಗಿ ೧೮೮೫ ರಲ್ಲಿ ಭಾರತೀಯರ ನಿಯೋಗವೊಂದನ್ನು ಕಳಿಸುವ ಏರ್ಪಾಡಾಗುತ್ತಿತ್ತು. ನಿಯೋಗದ ಕಾರ್ಯಕ್ರಮಗಳನ್ನು ಸಿದ್ಧಪಡಿಸುವುದರಲ್ಲಿ ರಾನಡೆ ಬಹು ಆಸಕ್ತಿ ವಹಿಸಿದರು. ಚುನಾವಣೆದಾರರಲ್ಲಿ ಹಂಚುವ ಪತ್ರಿಕೆಯ ಕರಡು ಪ್ರತಿಯನ್ನು ಸಿದ್ಧಪಡಿಸಿದರು.

೧೮೮೪ ರಲ್ಲಿ ಸ್ಥಳೀಯ ಸ್ವಯಮಾಡಳಿತ ಕಾನೂನು ಜಾರಿಗೆ ಬಂತು. ಕೆಲಮಟ್ಟಿಗೆ ಸಾರ್ವಜನಿಕ ಸಭಾದ ಮೂಲಕ ರಾನಡೆ ನಡಸಿದ ಪ್ರಯತ್ನಗಳ ಫಲವಾಗಿತ್ತು ಈ ಕಾನೂನು. ಅವರ ಮಿತ್ರರಾದ ಕುಂಟೆ ಎಂಬಾತನು ಈ ಕಾನೂನಿನ ವಿರುದ್ಧವಾಗಿ ಮಾತಾಡುವುದನ್ನು ಕಂಡು ರಾನಡೆಗೆ ಬಹು ವಿಷಾದವಾಯಿತು. ಒಂದು ದಿನ ಕುಂಟೆ ಪುಣೆಯಲ್ಲಿ ಭಾಷಣ ಮಾಡುತ್ತಿದ್ದಾಗ ರಾನಡೆ ಸಭೆಯನ್ನು ಪ್ರವೇಶಿಸಿ ಸಭಿಕರ ಮಧ್ಯೆ ಕುಳಿತರು. ಕುಂಟೆ ಅದನ್ನು ಕಂಡು ಅಸಮಾಧಾನ ಸೂಚಿಸುವುದಕ್ಕಾಗಿ ಸಭೆಗೆ ಬೆನ್ನು ಮಾಡಿ ಭಾಷಣ ಮಾಡಲು ಉಪಕ್ರಮಿಸಿದರು. ಭಾಷಣ ಮುಗಿದ ಮೇಲೆ ರಾನಡೆ ಅವರ ಬಳಿ ಹೋಗಿ ಕುಳಿತರು. ಗಾಳಿ ಸಂಚಾರಕ್ಕಾಗಿ ತಮ್ಮೊಡನೆ ಗಾಡಿಯಲ್ಲಿ ಬರಬೇಕೆಂದು ಕುಂಟೆಯನ್ನು ಕರೆದರು. ಆತ ಸಿಟ್ಟಿನಿಂದ ಬರುವುದಿಲ್ಲವೆಂದು ಹೇಳಿ ತನ್ನ ಗಾಡಿಗೆ ಹೋದರು. ರಾನಡೆ ಆತನನ್ನು ಹಿಂಬಾಲಿಸಿ ಹೋಗಿ—"ನೀವು ನನ್ನ ಗಾಡಿಯಲ್ಲಿ ಬರುವುದಿಲ್ಲವಾದರೆ, ನಾನೇ ನಿಮ್ಮ ಗಾಡಿಯಲ್ಲಿ ಬರುತ್ತೇನೆ" ಎಂದರು. ಗಾಡಿಯಲ್ಲಿ ಹೋಗುತ್ತಿದ್ದಂತೆ ಭಿನ್ನಾಭಿಪ್ರಾಯಗಳು ಮಾಯವಾದವು. ಮರುದಿನದಿಂದ ಕಾನೂನಿನ ವಿರುದ್ಧವಾಗಿ ಕುಂಟೆಯವರ ಭಾಷಣಗಳು ನಿಂತವು.

ಜಿ. ಕೆ. ಗೋಖಲೆಯವರು ಈ ಘಟನೆಯನ್ನು ನಿರೀಕ್ಷಿಸಿದರು. ರಾನಡೆಯವರ ನಡತೆ ಅವರಿಗೆ ಬಹುವಾಗಿ ಹಿಡಿಸಿತು. ಎರಡು ವರ್ಷಗಳ ನಂತರ ಗೋಖಲೆಗೆ ರಾನಡೆಯವರ ಪರಿಚಯವಾಯಿತು. ಆಗ ಗೋಖಲೆಗೆ ೨೧ ವರ್ಷ ವಯಸ್ಸು. ಅಂದಿನಿಂದ ಬೆಳೆದ ಅವರ ನಿಕಟ ಸಂಬಂಧ ಗೋಖಲೆಯವರ ಮೇಲೆ ಬಹು ಪರಿಣಾಮಕಾರಿಯಾಗಲಿತ್ತು. ಗೋಖಲೆ

ಯವರ ಸಾಮರ್ಥ್ಯವನ್ನು ರಾನಡೆ ಕೂಡಲೆ ಕಂಡುಕೊಂಡರು; ಮತ್ತು ಅದನ್ನು ಬೆಳಸಲು ತೊಡಗಿದರು. ರಾನಡೆಯವರ ತತ್ತ್ವಗಳನ್ನೇ ಅನುಸರಿಸುತ್ತಿರುವುದಾಗಿ ಗೋಖಲೆ ಹೇಳುತ್ತಿದ್ದರು. ರಾನಡೆಯನ್ನು ತಮ್ಮ ಗುರುವೆಂದು ಹೇಳಿದರು; ಅವರ ಸಮ್ಮುಖದಲ್ಲಿ ಕುಳಿತುಕೊಳ್ಳುತ್ತಿರಲಿಲ್ಲ, ಅವರಲ್ಲಿ ಅಪಾರವಾದ ಗೌರವವನ್ನು ಇಟ್ಟುಕೊಂಡಿದ್ದರು. ದಖನ್ನಿನ ಶಿಕ್ಷಣ ಸಮಿತಿ (Deccan Education Society)ಯ ಆಶ್ರಯದಲ್ಲಿ, ಫರ್ಗ್ಯುಸನ್ ಕಾಲೇಜಿನಲ್ಲಿ ಸುಮಾರು ೨೦ ವರ್ಷಗಳ ಕಾಲ, ಸಮಿತಿಯ ನಿಯಮಗಳಿಗನುಸಾರವಾಗಿ ಜೀವನಕ್ಕೆ ಎಷ್ಟು ಬೇಕೊ ಅಷ್ಟು ಅಲ್ಪ ವೇತನವನ್ನು ಮಾತ್ರ ಸ್ವೀಕರಿಸುತ್ತ, ಸೇವಾ ಮನೋಭಾವದಿಂದ ಉಪಾಧ್ಯಾಯರಾಗಿ ಕೆಲಸಮಾಡಿದರು. ೧೯೦೨ ರಲ್ಲಿ ಕರ್ತವ್ಯದ ಕರೆಯದ್ನು ಮನ್ನಿಸಿ, ಕಷ್ಟಗಳಿಂದ ಕೂಡಿದ ಸಾಗರೋಪಮವಾದ ಸಾರ್ವಜನಿಕ ಜೀವನವನ್ನು ಪ್ರವೇಶಿಸಲು, ಉಪಾಧ್ಯಾಯ ವೃತ್ತಿಯನ್ನು ತೊರೆದರು. ಅದೇ ವರ್ಷ ಇಂಪೀರಿಯಲ್ ಶಾಸನ ಸಭೆಯ ಸದಸ್ಯರಾದರು. ಆ ಮೂಲಕ ತಮ್ಮ ಪ್ರಭಾವವನ್ನು ಬೀರಿದರು. ಭಾರತದ ರಾಜಕೀಯ ಸಾಮಾಜಿಕ ಕೈಗಾರಿಕೋದ್ಯಮ ಪ್ರಶ್ನೆಗಳಲ್ಲಿ ಅಪಾರವಾದ ಶ್ರದ್ಧೆಯನ್ನು ವಹಿಸುತ್ತ ಭಾರತೀಯರ ಆಶೋತ್ತರಗಳ ಪ್ರಮುಖವಾದಿಯಾದರು. ೧೯೦೫ ರಲ್ಲಿ 'ಭಾರತ ಸೇವಕ ಸಂಘ' (Servants of India Society)ವನ್ನು ಸ್ಥಾಪಿಸಿದರು. ಭಾರತದ ಸೇವೆಗಾಗಿ ರಾಷ್ಟ್ರೀಯ ಸೇವಕರನ್ನು ತಯಾರು ಮಾಡಿ, ವ್ಯವಸ್ಥಾ ಬದ್ಧವಾದ ಎಲ್ಲ ವಿಧಗಳಿಂದಲೂ ಭಾರತೀಯರ ಹಿತಗಳನ್ನು ಬೆಳಸುವುದೇ ಸಂಘದ ಉದ್ದೇಶವಾಗಿತ್ತು. ರಾನಡೆಯವರೊಡನೆ ಉಂಟಾದ ದೀರ್ಘಕಾಲದ ನಿಕಟ ಸಂಬಂಧದಿಂದ ಗೋಖಲೆಯವರ ಮನಃಶೀಲಗಳು ಹದಗೊಂಡು ನಿಯೋಜಿಸಿದ ಮಹಾತ್ಕಾರ್ಯಗಳಿಗೆ ಅವರನ್ನು ಸಿದ್ಧಗೊಳಿಸಿದವು. ವಾಸ್ತವಾಂಶಗಳನ್ನು ಗ್ರಹಿಸಿ ನಡೆಯುವುದನ್ನೂ, ಆಳವಾದ ಅಭ್ಯಾಸದಿಂದ ವಿಷಯಗಳನ್ನು ನಿರ್ಧರಿಸುವುದನ್ನೂ ರಾನಡೆಯವರಿಂದ ಕಲಿತರು. ಗುರುವಿನ ವಿಶಾಲ ದೃಷ್ಟಿಯನ್ನೂ, ಚಿತ್ತ ಶಾಂತತೆಯನ್ನೂ ನೀತಿ ಶ್ರದ್ಧೆಯನ್ನೂ ಹೊಂದಿದರು.

ರಾನಡೆಯವರು ಶಾಸನ ಸಭೆಯ ಸದಸ್ಯರಾಗಿ ನೇಮಕವಾದದ್ದಕ್ಕಾಗಿ ಪುಣೆಯ ಪುರಜನರು ೧೮೮೫ ರ ಜೂನಿನಲ್ಲಿ ಅವರ ಗೌರವಾರ್ಥವಾಗಿ

ಔತಣವನ್ನು ಏರ್ಪಡಿಸಿದರು. ಆ ಸಂದರ್ಭದಲ್ಲಿ ಕೆಲವರು ರಾನಡೆಯವರು ಸರಕಾರಿ ಉದ್ಯೋಗವನ್ನು ಬಿಟ್ಟು ಸರಕಾರದ ಬಂಧನಗಳಿಂದ ವಿಮುಕ್ತರಾಗಿ ಪೂರ್ಣವಾಗಿ ಸಾರ್ವಜನಿಕ ಸೇವೆಯನ್ನು ಕೈಕೊಳ್ಳಬೇಕಾಗಿ ಸಲಹೆ ಮಾಡಿದರು. ರಾನಡೆ ತಮ್ಮ ಅಭಿಪ್ರಾಯ ಹಾಗಿಲ್ಲವೆಂದು ಹೇಳಿದರು.

ಅನೇಕ ವೇಳೆ ದೇಶೀಯ ಸಂಸ್ಥಾನಗಳಲ್ಲಿ ರಾನಡೆಯವರಿಗೆ ದೊಡ್ಡ ಹುದ್ದೆಗಳು ಲಭಿಸಲಿದ್ದವು. ೧೮೯೬ ರಲ್ಲಿ ಬರೋಡ ಸಂಸ್ಥಾನದಿಂದ ಮೂರನೆಯ ಬಾರಿ ಆಹ್ವಾನ ಬಂದಾಗ ಅವರು "ಬ್ರಿಟಿಷ್ ಸರಕಾರದೊಡನೆ ಇರುವ ನನ್ನ ಸಂಬಂಧದಲ್ಲಿ, ನಾನು ನನ್ನ ಉದ್ಯೋಗವನ್ನು ಯಶಸ್ವಿಯಾಗಿ ನಡಸಿಕೊಂಡು ಬಂದಿದ್ದರೂ, ಸ್ವಹಿತಕ್ಕಾಗಿ ಸ್ವಾತಂತ್ರ್ಯವನ್ನು ಬಿಟ್ಟು ಕೊಡತಕ್ಕವನಲ್ಲವೆಂದು ತಿಳಿದಿದೆ" ಎಂದು ಬರೆದಿದ್ದರು.

ರಾನಡೆಯವರ ರಾಜಕೀಯ ಲೇಖನಗಳನ್ನೂ ಭಾಷಣಗಳನ್ನೂ ಪರಿಶೀಲಿಸುವವರಿಗೆ ಮೂರು ವಿಷಯಗಳು ವ್ಯಕ್ತವಾಗುತ್ತವೆ. (೧) ಸ್ವದೇಶದ ದೋಷ ದೌರ್ಬಲ್ಯಗಳನ್ನು ಮುಚ್ಚುಮರೆಯಿಲ್ಲದೆ ಒಪ್ಪಿಕೊಳ್ಳುತ್ತಿದ್ದರು. (೨) ಸರಕಾರದ ದೋಷಗಳನ್ನು ನಿರ್ಭಯವಾಗಿ ಉದ್ಘಾಟಿಸುತ್ತಿದ್ದರು; (೩) ಬ್ರಿಟಿಷ್ ಸಂಬಂಧವನ್ನು ಅವರು ಮನಃಪೂರ್ವಕವಾಗಿ ಒಪ್ಪುತಿದ್ದರು.

ಭಾರತೀಯರಲ್ಲಿ ಸರ್ವಸಾಮಾನ್ಯವಾದ ಒಂದು ಗುರಿಯ ಸಾಧನೆಗಾಗಿ ಒಟ್ಟಾಗಿ ಸೇರಿ ಕೆಲಸ ಮಾಡುವ ಮನೋಭಾವವಿಲ್ಲ; ನಮ್ಮ ಜನರಲ್ಲಿ ಸಾಹಸವಿಲ್ಲ, ಹಿಡಿದ ಕೆಲಸವನ್ನು ಬಿಡದೆ ಪಟ್ಟುಹಿಡಿದು ಸಾಧಿಸುವ ಗುಣವಿಲ್ಲ; ನಾವು ಬಹು ಸುಲಭವಾಗಿ ಉಬ್ಬುತ್ತೇವೆ ಅಥವಾ ತಗ್ಗುತ್ತೇವೆ; —ಈ ದೋಷಗಳನ್ನು ಕಂಡು ರಾನಡೆ ವಿಷಾದಿಸುತ್ತಿದ್ದರು. ಅರ್ಥದ ಗ್ರಹಿಕೆಯಿಲ್ಲದೆ ಆಕರ್ಷಕ ಪದಗಳನ್ನು ಹಿಡಿದು ಕೂಗುವುದು ನಮ್ಮ ಜನರ ಸ್ವಭಾವವಾಗಿದೆಯೆಂದು ತಿಳಿದಿದ್ದರು. ೧೮೯೩ ರಲ್ಲಿ ಮಾತನಾಡುತ್ತ ಹೀಗೆ ಹೇಳಿದರು:

**ಬಿಡುಗಡೆ ಸ್ವಾತಂತ್ರ್ಯ ಈ ಪದಗಳನ್ನು ಎಸೆದಾಡುತ್ತೇವೆ, ಆದರೆ ಅನೇಕರಿಗೆ ಅವುಗಳ ಸರಿಯಾದ ಅರ್ಥ ತಿಳಿಯದು. ಸ್ವಾತಂತ್ರ್ಯವೆಂದರೆ ಶಾಸನಗಳನ್ನು ಮಾಡುವುದು, ತೆರಿಗೆ ಹಾಕುವುದು, ಶಿಕ್ಷೆ ವಿಧಿಸುವುದು, ಮತ್ತು ಅಧಿಕಾರಿಗಳನ್ನು ನೇಮಿಸುವುದು, ಈ ಮೊದಲಾದ ಹಕ್ಕುಗಳು. ಸ್ವತಂತ್ರವಾದ ದೇಶಕ್ಕೂ ಅಸ್ವತಂತ್ರ ರಾಷ್ಟ್ರಕ್ಕೂ ಇರುವ ನಿಜವಾದ ವ್ಯತ್ಯಾಸವೇನೆಂದರೆ, ಸ್ವತಂತ್ರ ದೇಶದಲ್ಲಿ ಶಿಕ್ಷೆ ವಿಧಿ**

**ಸುವ ಮೊದಲು ತಕ್ಕ ಕಾನೂನು ರಚಿತವಾಗಿರಬೇಕು; ತೆರಿಗೆಯನ್ನು ಹಾಕುವ ಜನರ ಸಮ್ಮತಿ ದೊರಕಿರಬೇಕು; ಶಾಸನವನ್ನು ಮಾಡುವ ಮೊದಲು ಜನಾಭಿಪ್ರಾಯ ವನ್ನು ತೆಗೆದುಕೊಂಡಿರಬೇಕು.**

ಹಿಂದಿನ ಕಾಲವನ್ನು ಅತಿಯಾಗಿ ಹೊಗಳಿಕೊಂಡು ಕಾಲ ಹಾಕುವ ಸ್ವಭಾವವನ್ನು ರಾನಡೆ ತಮ್ಮ ಕಾಲದ ಜನರಲ್ಲಿ ಕಂಡರು. ಅದರಿಂದ ವರ್ತಮಾನ ಕಾಲದ ವಿಚಾರದಲ್ಲಿ ಜನರು ಉದಾಸೀನರಾಗುವ ಅಪಾಯ ವನ್ನು ಕಂಡರು. ಪುರಾತನದ ವಿಷಯದಲ್ಲಿ ಗೌರವದಿಂದ ಇರುವುದೇನೂ ದೋಷವಲ್ಲ; ಆದರೆ ಅದರ ಜೊತೆಗೆ ನಾವು ನಮ್ಮಲ್ಲಿ ಶಕ್ತಿಯನ್ನೂ ಚಟು ವಟಿಕೆಯನ್ನೂ ಬೆಳಸಿಕೊಳ್ಳಬೇಕು—ಎಂದು ನುಡಿದರು. ಪೂರ್ವದ್ದನ್ನು ಹೊಗಳುವುದರಲ್ಲೂ ವಿವೇಚನೆ ಇರಬೇಕು ಎಂದು ಹೇಳಿದರು. ಭಾರತ ದಲ್ಲಿ ವಿಜ್ಞಾನ, ಸಾಹಿತ್ಯ, ವೇದಾಂತ ಇವುಗಳೆಲ್ಲ ಅಭಿವೃದ್ಧಿಗೊಂಡು ಭಾರತದ ಆಧಿಪತ್ಯ ಜಾವಾ ಮಂಗೋಲಿಯಾಗಳವರೆಗೆ ಹಬ್ಬಿದ್ದ ಕಾಲ ವನ್ನು ಮರ್ಯಾದೆಯಿಂದ ಕಾಣೋಣ. ಆದರೆ ಕಳೆದ ೧೫೦೦ ವರ್ಷಗಳಲ್ಲಿ ಭಾರತ ಅವನತಿಗೆ ಇಳಿದಿತ್ತು. ಆ ಕಾಲವನ್ನು ಗೌರವಿಸಬೇಕಾದ ಅಗತ್ಯ ವೇನೂ ಇಲ್ಲ. ಈಗಂತೂ ದೇಶದಲ್ಲಿ ಎಲ್ಲ ವೈಭವವೂ ಅಳಿದಿದೆ. ಆದ್ದ ರಿಂದ ಇಂದಿನ ಜನರು ದೃಢ ಚಿತ್ತದಿಂದಲೂ ತಾಳ್ಮೆಯಿಂದಲೂ ಸಂಕಲ್ಪ ಬುದ್ಧಿಯಿಂದಲೂ ಸಂತೋಷದಿಂದಲೂ ಕಾರ್ಯವೆಸಗಿ ಭಾರತದಲ್ಲಿ ಹಿಂದಿನ ವೈಭವವನ್ನು ಸ್ಥಾಪಿಸಬೇಕೆಂದು ಒತ್ತಿ ಹೇಳುತ್ತಿದ್ದರು. ಹಿಂದಿನದರೊಡನೆ ನಮ್ಮ ಸಂಬಂಧವನ್ನು ಕಡಿದುಹಾಕಬೇಕಾದ್ದಿಲ್ಲ, ಹಿಂದಿನ ಆಸ್ತಿ ಶ್ರೀಮಂತ ವಾಗಿಯೇ ಇದೆ; ಅದರ ವಿಷಯದಲ್ಲಿ ನಾವು ತಲೆ ತಗ್ಗಿಸಬೇಕಾಗಿಲ್ಲ. ಆದರೆ ಹಿಂದಿನ ಸಂಸ್ಕೃತಿಯೊಡನೆ ಬೆಳೆದು ಬಂದು ಅದರ ಜೀವವನ್ನು ಹೀರುತ್ತಿರುವ ಕಳೆಗಳನ್ನು ಕಿತ್ತುಹಾಕುತ್ತಲೇ ಇರಬೇಕು.—ಎಂದು ಎಚ್ಚರಿಸಿದರು.

ಸರಕಾರದ ಕಾರ್ಯಗಳನ್ನೂ ಇದೇ ಬಗೆಯ ಪ್ರಾಮಾಣಿಕತೆಯಿಂದ ವಿಮರ್ಶಿಸಿದರು. ಸರಕಾರದ ಭೂ ನೀತಿಯನ್ನು ವಿಮರ್ಶಿಸಿದ ರೀತಿಯನ್ನು ನಾವು ಹಿಂದೆಯೇ ನೋಡಿದ್ದೇವೆ. ವೈಸ್‌ರಾಯ್ ಗವರ್ನರುಗಳ ಆಡಳಿತ ದಾಖಲೆಗಳನ್ನು ನಿರ್ದಾಕ್ಷಿಣ್ಯವಾಗಿ ವಿಮರ್ಶಿಸಿದರು. ಇಂಡಿಯಾದಲ್ಲಿ ಸರ ಕಾರದ ಆಡಳಿತ ಹೆಚ್ಚು ಹೆಚ್ಚು ಕೇಂದ್ರೀಕೃತವಾಗುತ್ತಿದೆಯೆಂದೂ ಭಿನ್ನ

ವಾದ ಸ್ಥಳೀಯ ಪರಿಸ್ಥಿತಿಗಳಿಗೆ ತಕ್ಕ ಹೊಂದಾಣಿಕೆ ಅದರಲ್ಲಿ ಕಂಡು ಬರುತ್ತಿಲ್ಲವೆಂದೂ ತಿಳಿದರು. "ಒಂದು ಕಾನೂನು, ಒಂದು ನ್ಯಾಯ ಪದ್ಧತಿ, ಒಂದು ಅಳತೆ, ಒಂದೇ ಬಗೆಯ ತೆರಿಗೆ, ಒಂದೇ ರೀತಿಯ ನಿತ್ಯಗಟ್ಟಳೆಯ ನಮೂನೆಗಳು, ಏಕತೆಯೇ ಸರ್ವಸ್ವವೆಂಬ ಮೋಹ—ಇವು ಆಡಳಿತವನ್ನು ಸುತ್ತಿಕೊಂಡಿರುವ ಕರ್ಮ."* ಆಡಳಿತ ಕುಲದವರು ಎಂಥ ದೋಷಗಳಿಗೆ ಒಳಗಾಗುತ್ತಾರೆ, ಆ ದೋಷಗಳು ಹೆಚ್ಚಿದರೆ ಎಲ್ಲ ಅಭಿವೃದ್ಧಿಗೂ ಹೇಗೆ ಅಡಚಣೆಯಾಗುತ್ತವೆ ಎಂಬ ವಿಚಾರದಲ್ಲಿ ಅನೇಕವೇಳೆ ಬಿಚ್ಚುಮಾತುಗಳನ್ನಾಡಿದ್ದಾರೆ.

"ಇಂಡಿಯಾದಲ್ಲಿರುವ ಬ್ರಿಟಿಷ್ ಜನವರ್ಗ ತಾವು ಉತ್ತಮಕುಲದವರೆಂಬ ಗರ್ವ ಮನೋಭಾವವನ್ನು ತಾಳಿ, ತಮಗೆ ಹೆಚ್ಚು ಅಧಿಕಾರಗಳನ್ನೂ ವಿಶೇಷ ಹಕ್ಕುಗಳನ್ನೂ ಕೋರುತ್ತ ತಾವು ಜಯಿಸಿದ ಅಧೀನರಾದ ಜನರ ವಿಷಯದಲ್ಲಿ ತಿರಸ್ಕಾರ ಮನೋಭಾವವನ್ನು ತೋರುತ್ತಿದಾರೆ. ಇವೆಲ್ಲ ಚರಿತ್ರೆಗೆ ಹೊಸತಾದ ವಿಷಯಗಳೇನೂ ಅಲ್ಲ."

ಇಲ್ಬರ್ಟ್ ಮಸೂದೆಯ ವಿಚಾರದಲ್ಲಿ ಚರ್ಚೆ ಎದ್ದ ಸಮಯದಲ್ಲಿ ಮೇಲಿನ ಮಾತುಗಳನ್ನು ಆಡಿದರು.

ಬ್ರಿಟಿಷರ ವರ್ತನೆ, ಆಡಳಿತ ನೀತಿ ಮತ್ತು ಕಾರ್ಯಗಳಲ್ಲಿ ಅನೇಕ ದೋಷಗಳಿರುವುದನ್ನು ತಿಳಿದಿದ್ದರೂ ರಾನಡೆ ಬ್ರಿಟಿಷ್ ಸಂಬಂಧವನ್ನು ಸಮರ್ಥಿಸುವುದನ್ನು ಬಿಟ್ಟವರಲ್ಲ. ಲಾಹೋರಿನ ಸೋಷಿಯಲ್ ಕಾನ್ಫರೆನ್ಸಿನಲ್ಲಿ (೧೮೯೩) ಮಾತನಾಡುತ್ತ ಹೀಗೆ ಹೇಳಿದರು.

"ನನ್ನ ಧರ್ಮದ ಎರಡು ವಿಚಾರಗಳಲ್ಲಿ ನನಗೆ ಸಂಪೂರ್ಣ ನಂಬಿಕೆಯಿದೆ: ನಮ್ಮ ಈ ದೇಶ ನಿಜವಾದ ಭವಿಷ್ಯದಿಂದ ಕೂಡಿದೆ; ನಮ್ಮ ಜನ ದೇವರಿಗೆ ಪ್ರಿಯವಾದ ಜನ. ಪುರಾತನವಾದ ಈ ಆರ್ಯಾವರ್ತದ ಮೇಲೆ ಭಗವಂತನು ತನ್ನ ಅತ್ಯುತ್ಕೃಷ್ಟ ಅನುಗ್ರಹವನ್ನು ಸುಮ್ಮನೆ ಬೀರಿಲ್ಲ. ಆತನ ಕೈವಾಡವನ್ನು ಚರಿತ್ರೆಯಲ್ಲಿ ಕಾಣಬಹುದು. ಹಿರಿಯರಿಂದ ಉಳಿದು ಬಂದಿರುವ ನಮ್ಮ ಪುರಾತನ ನಾಗರಿಕತೆಯೂ ಧಾರ್ಮಿಕ ಸಾಮಾಜಿಕ ವ್ಯವಸ್ಥೆಗಳೂ ನಮ್ಮದೇ ಆಗಿವೆ; ಯಾವ ದೇಶಕ್ಕೂ ಇಲ್ಲದ ಸೌಲಭ್ಯವನ್ನು ಪಡೆದಿವೆ; ಕಾಲದ ರಂಗಭೂಮಿಯ ಮೇಲೆ ತಮ್ಮ ಬೆಳವಣಿಗೆಯನ್ನು ಸಾಧಿಸಿಕೊಳ್ಳುವ ಸ್ವಾತಂತ್ರ್ಯವನ್ನು ಹೊಂದಿವೆ. ಕ್ರಾಂತಿ ನಡೆಯದಿದ್ದರೂ, ಹಳೆಯ ಸ್ಥಿತಿಗತಿಗಳು ಮೆಲುವಾದ ಸಮೀಕರಣಮಾರ್ಗದಿಂದ ಸುಧಾರಣೆ ಹೊಂದುತ್ತಿವೆ.

---

* ಲಾರ್ಡ್ ರಿಪನ್‌ರವರ 'ಸ್ಥಳೀಯ ಸ್ವಯಮಾಡಳಿತ ಯೋಜನೆ'ಯನ್ನು ಕುರಿತು ಭಾಷಣ, ೧೮೮೪.

ನಮ್ಮ ಧರ್ಮ ಬೌದ್ಧಮತದ ಉತ್ತಮಗುಣಗಳನ್ನು ಜೀರ್ಣಿಸಿಕೊಂಡು, ದೋಷಗಳನ್ನು ತ್ಯಜಿಸಿ ಆ ಮತವನ್ನು ಹೇಗೆ ಜಯಿಸಿ ನಿಂತಿತು ಎಂಬುದನ್ನು ವಿವರಿಸುತ್ತಾರೆ. ಮಹಮ್ಮದೀಯರ ದಬ್ಬಾಳಿಕೆಯಿಂದ ಹೇಗೆ ವಿನಾಶವಾಗದೆ ಉಳಿಯಿತು ಎಂಬುದನ್ನು ತಿಳಿಸುತ್ತಾರೆ. ಪರರ ಧಾಳಿಗಳಿಂದ ದೌರ್ಬಲ್ಯವಿದ್ದ ಎಡೆಗಳನ್ನು ಅರಿತು ಜನ ತಮ್ಮ ಗುಣಗಳನ್ನು ಸರಿಪಡಿಸಿಕೊಂಡು ಬಲಪಡಿಸಿಕೊಂಡರು, ನಡತೆಯನ್ನೂ ಅಭಿರುಚಿಯನ್ನೂ ತಿದ್ದಿಕೊಂಡರು, ಜೀವನದ ವಾಸ್ತವಿಕಾಂಶಗಳಲ್ಲಿ ಪ್ರಗತಿಯನ್ನು ಸಾಧಿಸಿದರು. ಈ ಸಂಪರ್ಕದಿಂದ ಉಂಟಾದ ಶಾಶ್ವತ ಪ್ರಯೋಜನವೆಂದರೆ, ನಮ್ಮ ಮತಧರ್ಮ ಮತ್ತು ಭಾವನೆಗಳಿಗೆ ಉತ್ತಮ ಮಟ್ಟವುಂಟಾಯಿತು. "ಜಾತಿ, ವಿಗ್ರಹಾರಾಧನೆ, ಬಹು ದೈವ ಪೂಜೆ, ಶೌಚಾಶೌಚ ವಿಚಾರಗಳಲ್ಲಿ ಅತಿರೇಕದ ಭಾವನೆ—ಈ ವಿಚಾರಗಳಲ್ಲಿ ಮಹಮ್ಮದೀಯರೂ ಹಿಂದುಗಳೂ ವಿರುದ್ಧಭಾವವುಳ್ಳವರಾಗಿದ್ದರು"—ಎಂದು ರಾನಡೆ ತಮ್ಮ ಲಕ್ನೋ ಭಾಷಣದಲ್ಲಿ (ಸೋಷಿಯಲ್ ಕಾನ್ಫರೆನ್ಸ್, ೧೮೯೯) ವಿವರಿಸಿ, ಹದಿನೈದನೆಯ ಶತಕದಿಂದೀಚೆಗೆ ಹಿಂದೂ ಸಮಾಜದಲ್ಲಿ ಹುಟ್ಟಿದ ಸುಧಾರಣಾ ಮತಗಳಲ್ಲಿ "ಈ ಒಂದು ಸಾಮಾನ್ಯ ಧರ್ಮವಿತ್ತು: ಅವೆಲ್ಲವೂ ನಮ್ಮ ಸಮಾಜದ ಮೇಲೆ ವಿವರಿಸಿದ ದೋಷಗಳಿಗೆ ವಿರುದ್ಧವಾಗಿದ್ದವು" ಎಂದು ತಿಳಿಸಿದರು. ಭಾರತ ಚರಿತ್ರೆಯ ತತ್ತ್ವವನ್ನು ಈ ಮಾತುಗಳಲ್ಲಿ ಸಂಗ್ರಹಿಸಿದ್ದಾರೆ.

ಪರಕೀಯರ ಒಂದೊಂದು ಧಾಳಿಯೂ ಈ ಪ್ರಿಯ ಜನಾಂಗದಲ್ಲಿ ಹೇಗೆ ಶಿಸ್ತನ್ನುಂಟುಮಾಡಿ ಅದನ್ನು ಉತ್ತಮ ಆದರ್ಶದ ಕಡೆಗೆ ಕ್ರಮೇಣ ಒಯ್ದಿತು ಎಂಬುದು ಈ ಬೃಹದ್ದೇಶದ ಚರಿತ್ರೆಯಿಂದ ವ್ಯಕ್ತವಾಗುತ್ತದೆ... ಚೇತರಿಸಿಕೊಳ್ಳಲಾರದ ರೀತಿಯಲ್ಲಿ ಈ ದೇಶ ಎಂದೂ ಹತಾಶಗೊಂಡಿಲ್ಲ; ವಿದೇಶೀ ಪ್ರಭಾವಗಳ ಪ್ರವಾಹದಲ್ಲಿ ಕೊಂಚಕಾಲ ಮುಳುಗಿಹೋಗಿದ್ದರೂ—ಪರಕೀಯ ಧರ್ಮ ನೀತಿ ನಾಗರಿಕತೆಗಳಲ್ಲಿನ ಉತ್ತಮ ಗುಣಗಳನ್ನು ಹೀರಿಕೊಂಡು—ತಲೆಯೆತ್ತಿ ನಿಂತಿದೆ. (ಅಲಹಾಬಾದಿನ ಸೋಷಿಯಲ್ ಕಾನ್ಫರೆನ್ಸ್ ಭಾಷಣ, ೧೮೯೨).

ಬ್ರಿಟಿಷ್ ಸಂಬಂಧವನ್ನು ಈ ದೀರ್ಘ ನೀತಿ ಶಿಕ್ಷಣದ ಕಳಸವೆಂದು ತಿಳಿದರು.

ಒಂದು ಕ್ರಮದಲ್ಲೂ ನಿಯತಿಯರಿತ ಅಧಿಕಾರದಲ್ಲೂ ನಂಬಿಕೆಯಿಡುವ ಗುಣ ಹಿಂದುಗಳಲ್ಲಾಗಲಿ ಮಹಮ್ಮದೀಯರಲ್ಲಾಗಲಿ ಕಂಡುಬರಲಿಲ್ಲ. ಮ್ಯುನಿಸಿಪಲ್ ಸ್ವಾತಂತ್ರ್ಯದಲ್ಲಿ ನಂಬಿಕೆ, ಪೌರ ಜೀವನಕ್ಕೆ ಅಗತ್ಯವಾದ ಗುಣಗಳ ಆವಿಷ್ಕಾರ,

ಯಂತ್ರ ಕೌಶಲದಲ್ಲಿ ಇಚ್ಛೆ, ವಿಜ್ಞಾನ ಸಂಶೋಧನೆಗಳಲ್ಲಿ ಆಸಕ್ತಿ, ಸಾಹಸ ಮತ್ತು ಧೈರ್ಯದಿಂದ ಮುನ್ನುಗ್ಗಿ ಕಂಡುಹಿಡಿಯುವ ಉದ್ಯಮ, ಕಷ್ಟಗಳನ್ನು ಎದುರಿಸಿ ಜಯಿಸುವ ಆಕಾಂಕ್ಷೆ, ಸ್ತ್ರೀಯರ ವಿಷಯದಲ್ಲಿ ಧೀರತನದ ಮರ್ಯಾದೆ—ಈ ಗುಣಗಳು ಇಬ್ಬರಲ್ಲೂ ಇಲ್ಲ. ಪಶ್ಚಿಮ ಯೂರೋಪಿನ ಜನಾಂಗಗಳಿಗೆ ಸರಿಸಮನಾಗಿ ನಿಲ್ಲುವಂತೆ ಭಾರತದ ಜನರಲ್ಲಿ ಈ ಶೀಲ ಶಕ್ತಿಗಳನ್ನು ತುಂಬಿ ತಯಾರುಮಾಡುವಂಥ ಸ್ಥಿತಿಯಲ್ಲಿ ಪುರಾತನ ಹಿಂದೂ ನಾಗರಿಕತೆಯಾಗಲಿ ಹಳೆಯ ಮಹಮ್ಮದೀಯ ನಾಗರಿಕತೆಯಾಗಲಿ ಇರಲಿಲ್ಲ. ಈ ಶಿಕ್ಷಣದ ಕೆಲಸ ನಡೆಯಬೇಕಾಗಿತ್ತು, ಕಳೆದ ಒಂದು ಶತಮಾನ ಕಾಲದಿಂದ ಇದು ಬ್ರಿಟಿಷರಿಂದ ನಡೆಯುತ್ತಿದೆ. ಅದರ ಫಲಗಳೇನೆಂಬುದಕ್ಕೆ ನಾವೇ ಸಾಕ್ಷಿಯಾಗಿದ್ದೇವೆ. (ಲಕ್ನೋ ಸೋಷಿಯಲ್ ಕಾನ್ಫರೆನ್ಸ್ ಭಾಷಣ, ೧೮೯೯).

ರಾಜಕೀಯದಲ್ಲಿ ಪ್ರತೀಕಾರ ಮನೋಭಾವವೂ ಜನರಲ್ಲಿ ನಿರಾಶೆಯೂ ತುಂಬಿದ್ದ ಕಾಲದಲ್ಲಿ ಸಹ ರಾನಡೆ ಬ್ರಿಟಿಷರ ಸದ್ವಿವೇಚನೆಯಲ್ಲೂ ನ್ಯಾಯ ಪಕ್ಷಪಾತ ಬುದ್ಧಿಯಲ್ಲೂ ನಂಬಿಕೆಯಿಟ್ಟಿದ್ದರು, ಭಾರತದ ನ್ಯಾಯವಾದ ಹಕ್ಕುಗಳನ್ನು ಅಂಗೀಕರಿಸುವರೆಂದು ನಂಬಿದ್ದರು. " ನವಚೈತನ್ಯದಿಂದ ಕೂಡಿದ ಇಂಡಿಯಾ ಪ್ರಪಂಚದ ಜನಾಂಗಗಳ ನಡುವೆ ತಕ್ಕ ಸ್ಥಾನವನ್ನು ಹೊಂದಿ, ತನ್ನ ಪರಿಸ್ಥಿತಿಗೆ ತಾನೇ ಹೊಣೆಯಾಗಿ ತನ್ನ ಭವಿಷ್ಯತ್ತಿಗೆ ತಾನೇ ಅಧಿಪತಿಯಾಗುತ್ತದೆ. ನಾವು ಸಾಧಿಸಬೇಕಾದ ಗುರಿ ಇದು, ನಿರೀಕ್ಷಿಸಿರುವ ನೆಲೆ ಇದು. ಭವಿಷ್ಯದ್ದೂರದಲ್ಲಿ ಇದನ್ನು ಕಾಣುವವರು ಸುಖಿಗಳು; ಇದಕ್ಕಾಗಿ ಕೆಲಸಮಾಡಿ ದಾರಿಯನ್ನು ಸುಗಮಮಾಡಲು ಅವಕಾಶ ಹೊಂದಿರುವವರು ಹೆಚ್ಚು ಸುಖಿಗಳು; ಅದನ್ನು ಕಾಣುವವರೆಗೆ ಜೀವಿಸಿದ್ದು ಆ ಪವಿತ್ರ ಭೂಮಿಯ ಮೇಲೆ ಪದಾರ್ಪಣಮಾಡುವ ಪುಣ್ಯವಿರುವವರು ಅತ್ಯಂತ ಸುಖಿಗಳು." (ಕಲ್ಕತ್ತದ ಸೋಷಿಯಲ್ ಕಾನ್ಫರೆನ್ಸ್ ಭಾಷಣ (೧೮೯೯).—ಇದು ಅವರ ಕನಸು ಅಥವಾ ನಂಬಿಕೆಯಾಗಿತ್ತು.

# ೯. ಅರ್ಥಶಾಸ್ತ್ರಜ್ಞ

## ಭಾರತದ ಬಡತನದ ಸಮಸ್ಯೆ

೧೮೯೦ರಲ್ಲಿ ರಾನಡೆ ಪಶ್ಚಿಮ ಇಂಡಿಯದ ಕೈಗಾರಿಕಾ ಸಂಘವನ್ನು ಸ್ಥಾಪಿಸಿದರು. ರಾಜಕೀಯ ಸಾಮಾಜಿಕ ಚಳವಳಿಗಳಿಗೆ ಪೂರಕವಾಗಿ ಕೈಗಾರಿಕಾ ಚಳವಳಿ ಅಗತ್ಯವೆಂದು ತಿಳಿದಿದ್ದರು. ರಾನಡೆ ೧೮೮೮ ರಲ್ಲಿಯೆ ಈ ವಿಷಯವನ್ನು ಸ್ನೇಹಿತರಲ್ಲಿ ಪ್ರಸ್ತಾಪಿಸುತ್ತ ಕಾರ್ಯೋನ್ಮುಖರಾಗಿದ್ದರು. ಹ್ಯೂಮ್ ಅದನ್ನು ಒಳ್ಳೆಯ ಸಲಹೆಯೆಂದರು. ಆದರೆ ಈ ಹೊಸ ಭಾರವನ್ನು ಕಾಂಗ್ರೆಸ್ಸಿನ ಮೇಲೆ ಹೊರಿಸುವುದು ಸರಿಯೆ ಎಂದು ಶಂಕಿಸಿದರು. ಕಾಂಗ್ರೆಸ್ಸಿಗಾಗಿ ಕಾಯದೆ ರಾನಡೆ ಸ್ವತಃ ಈ ದಿಶೆಯಲ್ಲಿ ಬೊಂಬಾಯಿ ಪ್ರಾಂತದಲ್ಲಿ ಕೆಲಸ ನಡಸಲಾರಂಭಿಸಿದರು. ಅಹಮದ್ ನಗರದಲ್ಲಿ ತಮ್ಮ ಯೋಜನೆಯನ್ನು ಕುರಿತು ಮಾತನಾಡಿದರು (೧೮೮೮). ೧೮೯ ರ ಫೆಬ್ರವರಿಯಲ್ಲಿ ಈ ವಿಷಯವಾಗಿ ಜಿ. ವಿ. ಜೋಷಿಗೆ ಪತ್ರ ಬರೆದರು.

ಮೊದಲನೆಯ ಕೈಗಾರಿಕಾ ಸಮ್ಮೇಳನ ೧೮೯೦ ರಲ್ಲಿ ಪುಣೆಯಲ್ಲಿ ಸೇರಿತು. ರಾನಡೆ ಚಳವಳಿಯ ಉದ್ದೇಶಗಳನ್ನು ವಿವರಿಸಿದರು. ಅಲ್ಲದೆ "ನೆದರ್ಲೆಂಡ್ಸ್ ಇಂಡಿಯಾ ಮತ್ತು ವ್ಯವಸಾಯ ಪದ್ಧತಿ" ಎಂಬ ವಿಷಯವಾಗಿ ಲೇಖನವನ್ನು ಓದಿದರು. ಮುಂದಿನ ಮೂರು ವಾರ್ಷಿಕ ಸಮ್ಮೇಳನಗಳಲ್ಲೂ ಲೇಖಗಳನ್ನು ಓದಿದರು. ೧೮೯೨ ರಲ್ಲಿ ಪುಣೆಯ ಡೆಕ್ಕನ್ ಕಾಲೇಜಿನಲ್ಲಿ ಅವರು ಮಾಡಿದ ಭಾಷಣ—"ಭಾರತದ ಅರ್ಥನೀತಿ"—ಭಾರತದ ಅರ್ಥಶಾಸ್ತ್ರ ಚರಿತ್ರೆಯಲ್ಲಿ ಒಂದು ಹೆಗ್ಗುರುತಾಗಿದೆ.

ಸರಕಾರದ ವ್ಯಾಪಾರ ನೀತಿಯ ಪರಿಣಾಮವಾಗಿ ೧೮೯೦ ರಲ್ಲಿ ಸ್ವದೇಶೀ ಚಳವಳಿ ತಲೆಯೆತ್ತಿತ್ತು. 'ಸ್ವದೇಶಿ' ಎಂದರೆ ವಿದೇಶೀ ವಸ್ತುಗಳನ್ನು ಬಹಿಷ್ಕರಿಸುವುದು ಮತ್ತು ಇಂಡಿಯದಲ್ಲಿ ತಯಾರಾದ ವಸ್ತುಗಳನ್ನು ಮಾತ್ರ ಕೊಳ್ಳುವುದು ಎಂದು ಅರ್ಥ. ಚಳವಳಿಯ ವಿಷಯದಲ್ಲಿ ರಾನಡೆಯವರಿಗೆ ಸಹಾನುಭೂತಿ ಇತ್ತೆಂದು ಹೇಳುವ ಆವಶ್ಯಕತೆಯಿಲ್ಲ. ಆದರೆ ಅದರ ಹಲವು ರೀತಿ ನೀತಿಗಳು ಅವರಿಗೆ ಸರಿಯಾದುವೆಂದು ತೋರಲಿಲ್ಲ. ಡೆಕನ್ ಕಾಲೇಜಿನ ವಿದ್ಯಾರ್ಥಿಗಳು ಸ್ವದೇಶೀ ಭಂಡಾರವೊಂದನ್ನು ತೆರೆದಾಗ

ರಾನಡೆ ಅವರನ್ನುದ್ದೇಶಿಸಿ ಭಾಷಣ ಮಾಡುತ್ತ–ಯಂತ್ರ ಸಾಮಗ್ರಿಗಳನ್ನು ನಾವು ಅವಶ್ಯವಾಗಿ ಉಪಯೋಗಿಸಬೇಕು, ಇಲ್ಲವಾದರೆ ಸ್ವದೇಶೀ ಚಳವಳಿ ಜಯಪ್ರದವಾಗದೆ ಹೋಗಬಹುದು—ಎಂದು ವ್ಯಕ್ತಪಡಿಸಿದರು. ರಾನಡೆಯವರ ಅಭಿಪ್ರಾಯದಲ್ಲಿ ಇಂಡಿಯಾಕ್ಕೆ ವಿದೇಶೀ ಬಂಡವಾಳ ಅಗತ್ಯವಾಗಿ ಬೇಕು, ಅದರಿಂದ ದೇಶಕ್ಕೆ ಹಾನಿಯಿಲ್ಲ. ಆ ರೀತಿಯ ಅಭಿಪ್ರಾಯವನ್ನು ವ್ಯಕ್ತಪಡಿಸುವುದು ಚಳವಳಿಗೆ ಹಾನಿಕರವೆಂದು ಟಿಳಕ್ ಮತ್ತು ನಾಮ್ ಜೋಶಿ ತಿಳಿದಿದ್ದರು. ಈ ಭಿನ್ನಾಭಿಪ್ರಾಯಗಳಿಂದ ಕೈಗಾರಿಕಾ ಸಂಘದಲ್ಲಿ ಒಡಕು ಹುಟ್ಟಿತು. ಕೈಗಾರಿಕೆಯ ಚಳವಳಿಗೆ ಎಲ್ಲ ಜಾತಿ ಜನವರ್ಗಗಳ—ವಿದೇಶೀಯರ—ಸಹಾಯವನ್ನೂ ಪಡೆಯಬೇಕೆಂಬುದು ರಾನಡೆಯವರ ಆಸೆಯಾಗಿತ್ತು.

ಭಾರತದ ವ್ಯಾಪಕವಾದ ದಾರಿದ್ರ್ಯದ ಕಾರಣಗಳನ್ನು ವಿವರಿಸುವುದೂ, ಅದನ್ನು ಬಗೆಹರಿಸಲು ಅನುಸರಿಸಬೇಕಾದ ಮಾರ್ಗಗಳನ್ನು ವಿಸ್ತರಿಸುವುದೂ ರಾನಡೆಯವರ ಮುಖ್ಯಗುರಿಯಾಗಿತ್ತೆಂದು—ಅವರ ಅರ್ಥನೀತಿಯ ಲೇಖನಗಳನ್ನು ಪರಿಶೀಲಿಸಿದರೆ ವ್ಯಕ್ತವಾಗುತ್ತದೆ. ಈ ಲೇಖನಗಳು ಚಾರಿತ್ರಿಕ ನಿದರ್ಶನಗಳಿಂದಲೂ, ಬಹು ಶ್ರಮದಿಂದ ಜಾಗರೂಕತೆಯಿಂದ ಸಂಕಲಿಸಿದ ಸಂಗತಿಗಳ ಆಧಾರಗಳಿಂದಲೂ ತುಂಬಿ ತೂಕವಾಗಿ ಪರಿಣಾಮಕಾರಿಯಾಗಿವೆ. ಭಾರತದ ಬಡತನವನ್ನು ವಿವರಿಸಬೇಕಾಗಿಲ್ಲ, ಅದು ಸ್ಪಷ್ಟವಾಗಿಯೇ ಇದೆಯೆಂದು ರಾನಡೆ ಹೇಳುತ್ತಾರೆ.

"ನಮ್ಮ ದೇಶದ ಬೀದಿಗಳಲ್ಲಿ ನಡೆದು ನಮ್ಮ ಆರ್ಥಿಕ ಪರಿಸ್ಥಿತಿಯ ರೂಪರೇಖೆಗಳನ್ನು ಮೇಲೆ ಮೇಲೆ ನೋಡಿದರೂ ಸಾಕು, ನಮ್ಮ ಜನ ಏನೂ ಸಾಧನ ಸಂಪತ್ತು ಇಲ್ಲದವರೆಂದು ತಿಳಿಯುತ್ತದೆ. ನಮ್ಮಲ್ಲಿ ಲಕ್ಷಾಂತರ ಜನರು ದಿನಕ್ಕೆ ಒಂದೆರಡು ಆಣೆಗಳನ್ನು ಸಂಪಾದಿಸಿದರೆ ಹೆಚ್ಚು; ಇನ್ನೂ ಲಕ್ಷಾಂತರ ಜನ ಸಾಕಷ್ಟು ಆಹಾರವಿಲ್ಲವೆ ಸಾವು ಬರಗಳ ನಡುವೆ ತೊಳಲುತ್ತಾರೆ; ಬರುವ ಒಂದು ಮಳೆ ಬಾರದಿದ್ದರೆ ಈ ಸ್ಥಿತಿ ವಿಷಮವಾಗುತ್ತದೆ. ಈ ವಸ್ತು ಪರಿಸ್ಥಿತಿ ನಿನ್ನೆ ಮೊನ್ನೆಯದಲ್ಲ; ಅಥವಾ ವಿದೇಶೀಯರ ದಾಳಿ ಪೈಪೋಟಿಗಳಿಂದ ಮಾತ್ರ ಹುಟ್ಟಿದ್ದಲ್ಲ. ಇದು ಬಹುಕಾಲದಿಂದ ನಡೆದು ಬಂದದ್ದು. ಯುಗ ಯುಗಗಳ ನಿದ್ರೆಯಿಂದ ಎಚ್ಚತ್ತು ಈಗ ನಮ್ಮ ಕಣ್ಣುಗಳು ನೋಡುವುದನ್ನೂ ಕಿವಿ ಕೇಳುವುದನ್ನೂ ಕಲಿತಿರುವುದರಿಂದ, ಈಗ ನಮಗಿದರ ಅರಿವು ಉಂಟಾಗುತ್ತಿದೆ."

ವಿದೇಶೀ ಪ್ರಭುತ್ವದಿಂದ ಸ್ಥಿತಿ ಉತ್ತಮಗೊಂಡಿದೆಯೇ ಅಥವಾ

ಕೀಳಾಯಿತೇ ಎಂಬ ವ್ಯರ್ಥವಾದ ಚರ್ಚೆಯಲ್ಲಿ ಅವರಿಗೆ ಆಸಕ್ತಿಯಿಲ್ಲ. ವಾಸ್ತವಾಂಶಗಳನ್ನು ಗ್ರಹಿಸಿ ದೇಶದ ಸದ್ಯದ ಅಸಹಾಯಕ ಸ್ಥಿತಿಯನ್ನು ನೀಗುವ ಮಾರ್ಗಗಳನ್ನು ಹುಡುಕುವುದು ಅವರ ಗುರಿ. ವ್ಯವಸಾಯವೊಂದನ್ನೇ ಆಶ್ರಯಿಸಿರುವುದು ಭಾರತದ ಬಡತನಕ್ಕೆ ಮುಖ್ಯ ಕಾರಣವೆಂಬುದು ಅವರ ಅಭಿಪ್ರಾಯ.

"ಅನೇಕ ಪುರಾತನ ಜನಾಂಗಗಳಂತೆ ನಾವೂ ಸಹ ಉದ್ದಕ್ಕೂ ಹೆಚ್ಚು ಕಡಮೆ ಬೇಸಾಯದ ಜನರಾಗಿದ್ದೇವೆ. ಹೊರಗಿನ ಪ್ರಪಂಚದೊಡನೆ ನಮ್ಮ ಸಂಪರ್ಕದಿಂದ ಈ ಪರಿಸ್ಥಿತಿ ಉತ್ಕಟವಾಗಿದೆ ... ನಮ್ಮ ದೇಶದ ವ್ಯಾಪಾರ ಕೈಗಾರಿಕೆಗಳು ನಮ್ಮ ಕೈತಪ್ಪಿ ಹೋಗುತ್ತಿವೆ.... ದೇಶದ ಆಹಾರ, ಬಟ್ಟೆ,.... ದೀಪ, ... ಸುಖಸಾಧನಗಳು.... ಇವುಗಳನ್ನು ಒದಗಿಸುವ ಸಾವಿರಾರು ಕಲೆ ಕೈಗಾರಿಕೆಗಳಲ್ಲಿ ನಾಡಮಕ್ಕಳ ಕೈವಾಡ ದಿನದಿನಕ್ಕೆ ಕಮ್ಮಿಯಾಗುತ್ತಿದೆ. ವಿದೇಶೀ ಪೈಪೋಟಿ ದೇಶದ ಸಂಪತ್ತಿನ ಒಡೆತನವನ್ನು ಮಾತ್ರವಲ್ಲದೆ ಅದಕ್ಕೂ ಮುಖ್ಯವಾದ ಕಾರ್ಯಕುಶಲತೆ ಜಾಣ್ಮೆ ಚಟುವಟಿಕೆ ಇವುಗಳನ್ನೆಲ್ಲ ಪರರ ಸ್ವಾಧೀನಕ್ಕೆ ಸಾಗಿಸುತ್ತಿದೆ. ಪೈಪೋಟಿ ವಿದೇಶದ್ದಾದ್ದರಿಂದ ಹೀಗಾಗುತ್ತಿದೆಯೆನ್ನುವುದು ಸರಿಯಲ್ಲ. ಮನುಷ್ಯನ ಶ್ರಮಕ್ಕೆದುರಾಗಿ ಪ್ರಕೃತಿಯ ಶಕ್ತಿಗಳೂ, ಅಜ್ಞಾನ ಆಲಸ್ಯಗಳಿಗೆ ಎದುರಾಗಿ ವ್ಯವಸ್ಥಿತವಾದ ಕೌಶಲವೂ ಸೈನ್ಯೂ ಸ್ಪರ್ಧೆ ನಡಸುತ್ತಿವೆ ಎಂಬುದನ್ನು ಗಮನಿಸುವುದು ಆವಶ್ಯಕ." (ಮೊದಲನೆಯ ಕೈಗಾರಿಕಾ ಸಮ್ಮೇಳನದ ಆರಂಭ ಭಾಷಣ, ೧೮೯೦.)*

"ಸರಕಾರವು ಅನುಸರಿಸುತ್ತಿರುವ ರೈಲ್ವೆ ನೀತಿಯು, ಕೆಲವು ಮುಖ್ಯ ನಗರಗಳನ್ನುಳಿದು ಇತರೆಡೆಗಳಲ್ಲೆಲ್ಲ ಸ್ಥಳೀಯ ಸ್ವದೇಶೀ ಕೈಗಾರಿಕೆಗಳನ್ನು ನಾಶಮಾಡಿದೆ. ಅದರಿಂದ ಜನ ಬೇಸಾಯವನ್ನೇ ಹೆಚ್ಚು ಹೆಚ್ಚಾಗಿ ಅವಲಂಬಿಸುವಂತಾಗಿ ಅಸಹಾಯಕ ಸ್ಥಿತಿಯಲ್ಲಿದ್ದಾರೆ."

ದೇಶದಲ್ಲಿ ಸಾಕಾದಷ್ಟು ಬಂಡವಾಳವಿಲ್ಲದಿರುವುದು ದೇಶದ ಬಡತನಕ್ಕೆ ಮತ್ತೊಂದು ಕಾರಣವೆಂದು ರಾನಡೆ ಒತ್ತಿ ಹೇಳುತ್ತಾರೆ. ನಮ್ಮ ದೇಶದ ಸಾಲದ ಪದ್ಧತಿಯೂ ಬಡತನಕ್ಕೆ ಕಾರಣವಾಗಿರುವುದನ್ನು ಹಿಂದೆಯೇ (ಅಧ್ಯಾಯ ೫) ವಿವರಿಸಿದೆ. ನಮ್ಮ ದೇಶದಲ್ಲಿ ಕೆಲವು ಕಡೆ ಜನಸಾಂದ್ರತೆ ತೀರ ಹೆಚ್ಚಾಗಿರುವುದರಿಂದ, ಆ ಸ್ಥಳಗಳಲ್ಲಿ ಭೂಮಿ ಹೋಳುಗಳಾಗಿ ವಿಭಾಗಿಸಲ್ಪಟ್ಟು ಅದನ್ನು ಆಶ್ರಯಿಸಿರುವ ಜನಕ್ಕೆ ತಕ್ಕಷ್ಟು ಆಹಾರವನ್ನು

---

* ಜಿ. ಎ. ನಟೇಶನ್ ಕಂಪೆನಿಯವರು ಪ್ರಕಟಿಸಿರುವ 'ಎಸ್ಸೇಸ್ ಆನ್ ಇಂಡಿಯನ್ ಎಕನಾಮಿಕ್ಸ್, ೧೯೧೬—ಈ ಗ್ರಂಥವನ್ನು ನೋಡಿ.

ಒದಗಿಸಲಾರದೆ ಹೋಗುತ್ತದೆ. ದೇಶದ ಬಡತನಕ್ಕೆ ಇದೂ ಒಂದು ಕಾರಣ ವನ್ನು ಹೇಳುತ್ತಾರೆ. ಜನರಲ್ಲಿ ಸಾಹಸ ಮನೋಭಾವವಿಲ್ಲದಿರುವಿಕೆ, ಚಟು ವಟಿಕೆಯಿಲ್ಲದಿರುವುದು, ಆಶೆಯಿಲ್ಲದಿರುವುದು, ಸಂಪದಭಿವೃದ್ಧಿಯನ್ನು ಸಾಧಿ ಸಲು ಅನುಕೂಲವಿಲ್ಲದಿರುವಂಥ ಸಾಮಾಜಿಕವ್ಯವಸ್ಥೆ—ಇವೂ ದೇಶದ ಬಡ ತನಕ್ಕೆ ಕಾರಣವೆಂದು ತಿಳಿಸುತ್ತಾರೆ.

ರಾನಡೆ ಬಡತನದ ಪರಿಹಾರಕ್ಕೆ ಮಾರ್ಗಗಳನ್ನೂ ಸೂಚಿಸಿದರು. ರೈತರ ಸಾಲದ ಸಮಸ್ಯೆಗಳನ್ನು ಈ ಹಿಂದೆಯೇ ಚರ್ಚಿಸಲಾಗಿದೆ. ದೇಶದ ಕೈಗಾರಿಕೆಗಳನ್ನೂ ವಾಣಿಜ್ಯವನ್ನೂ ಅಭಿವೃದ್ಧಿಪಡಿಸುವುದೇ ಇಂಡಿಯದ ಆರ್ಥಿಕಪ್ರಗತಿಗೆ ಮುಖ್ಯವಾದ ಮಾರ್ಗವೆಂದು ರಾನಡೆ ತಿಳಿದಿದ್ದರು :

"ವ್ಯವಸ್ಥಿತವಾದ ಸಹಕಾರ ಮಾರ್ಗದಿಂದ ನಾವು ವಿದೇಶೀಯ ರೊಡನೆ ಸ್ಪರ್ಧಿಸಬೇಕು. ನಮಗೆ ಬೇಕಾಗುವ ಕಚ್ಚಾ ಮಾಲುಗಳನ್ನು ತರಿಸಿ, ಅವುಗಳನ್ನು ಮಾರ್ಪಡಿಸಿ ಬೆಲೆಯುಳ್ಳ ವಸ್ತುಗಳನ್ನಾಗಿ ಮಾಡಿ ರಫ್ತುಮಾಡಬೇಕು....ನಮ್ಮ ಕೈಗಾರಿಕಾಜನವರ್ಗಕ್ಕೆ ಈರೀತಿ ಕೆಲಸವನ್ನು ಒದಗಿಸಬೇಕು".

ಸರಕಾರ ಇಂಡಿಯಾದಲ್ಲಿ ಕೈಗಾರಿಕೆಗಳನ್ನು ಬೆಳಸಬೇಕೆಂದೂ ಅವು ಗಳಿಗೆ ಉತ್ತೇಜನ ಕೊಡಬೇಕೆಂದೂ ರಾನಡೆ ಬಿಡುವಿಲ್ಲದೆ ವಾದಿಸುತ್ತಿದ್ದರು. ಸರಕಾರ ಕೈಗಾರಿಕಾ ನೀತಿಯನ್ನು ಹೊಂದಿಲ್ಲದಿರುವುದಕ್ಕಾಗಿ ವಿಷಾದಪಡು ತ್ತಿದ್ದರು. ಸಿಂಕೋನ, ಟೀ, ಕಾಫಿ ಇವುಗಳ ಕೃಷಿಗೆ ಸರಕಾರ ಸಹಾಯ ಮಾಡುತ್ತಿರುವಂತೆ ನೂತನ ಕೈಗಾರಿಕೆಗಳನ್ನು ಸ್ಥಾಪಿಸಿ ಅಭಿವೃದ್ಧಿಪಡಿಸುವು ದಕ್ಕೂ ಸಹಾಯ ನೀಡತಕ್ಕದ್ದು ಅಗತ್ಯವೆಂದು ಸಲಹೆ ಮಾಡಿದರು. ಸರಕಾರ ರೈಲ್ವೆಗಳ ವಿಷಯದಲ್ಲಿ ನಡೆದಿರುವಂತೆ, ಕೈಗಾರಿಕೆಗಳಿಗೆ ಬಂಡವಾಳವನ್ನು ಒದಗಿಸುವವರಿಗೂ ಬಡ್ಡಿಯ ವಿಷಯದಲ್ಲಿ ಖಾತರಿಯನ್ನು ನೀಡಬೇಕು ಮತ್ತು ಕೈಗಾರಿಕೆ ಯಶಸ್ವಿಯಾಗುವವರೆಗೆ ಅದಕ್ಕೆ ಸಹಾಯವನ್ನು ನೀಡ ಬೇಕು—ಎಂದು ಸ್ಪಷ್ಟಪಡಿಸಿದರು.

ದೊಡ್ಡ ಕೈಗಾರಿಕೆಗಳಿಗೆ ಅಗತ್ಯವಾದ ಸುಲಭದರದ ಬಂಡವಾಳ ದೊರೆಯದಿರುವುದು ಭಾರತದ ಕೈಗಾರಿಕಾಭಿವೃದ್ಧಿಗೆ ಒಂದು ದೊಡ್ಡ ಅಡ ಚಣೆಯಾಗಿದೆ. ರಾನಡೆ, ಆದ್ದರಿಂದ ಸರಕಾರ ಸ್ಥಳೀಯ ಸಂಸ್ಥೆಗಳ ಮೂಲ ಕವೂ ನೂತನವಾಗಿ ಸ್ಥಾಪಿಸಲ್ಪಟ್ಟ ವಾಣಿಜ್ಯ ಬೋರ್ಡುಗಳ ಮೂಲಕವೂ

ಕೈಗಾರಿಕೋದ್ಯಮಗಳಿಗಾಗಿ ಖಾಸಗಿ ಪ್ರಯತ್ನಗಳಿಗೆ ಸುಲಭ ದರದ ಬಡ್ಡಿಯಲ್ಲಿ ಸಾಲವನ್ನು ಒದಗಿಸಬೇಕೆಂದು ಸಲಹೆ ಮಾಡಿದರು. ಸರಕಾರ ತಾವು ಸೂಚಿಸಿದ ಕೈಗಾರಿಕಾ ನೀತಿಯನ್ನು ಅನುಸರಿಸಿ ನಡಸಿದ್ದೇ ಆದರೆ, ಅದು ಸ್ಕೂಲು ಕಾಲೇಜುಗಳಿಗಿಂತ ಹೆಚ್ಚಾಗಿ ದೇಶದಲ್ಲಿ ನವಚೈತನ್ಯವನ್ನು ಉಂಟುಮಾಡುತ್ತದೆ ಎಂದು ರಾನಡೆ ನಂಬಿದ್ದರು.

ಭಾರತದ ಕೈಗಾರಿಕಾ ಪ್ರಗತಿಗಾಗಿ ಸೂಚಿಸುತ್ತಿದ್ದ ಸಲಹೆಗಳನ್ನೆಲ್ಲ ಸರಕಾರ ತಿರಸ್ಕರಿಸುತ್ತಿದ್ದರು. ಅಧಿಕಾರದಲ್ಲಿದ್ದವರು ಜೆ. ಎಸ್. ಮಿಲ್ ಮೊದಲಾದ ಹಳೆಯ ಅರ್ಥಶಾಸ್ತ್ರಜ್ಞರು ಪ್ರತಿಪಾದಿಸುತ್ತಿದ್ದ ತಾಟಸ್ಥ್ಯನೀತಿ **(laissez-faire)** ವಿಶ್ವಕ್ಕೆಲ್ಲ ಅನ್ವಯಿಸತಕ್ಕದ್ದೆಂದು ತಿಳಿದಿದ್ದುದೇ ಅದಕ್ಕೆ ಕಾರಣವೆಂದು ರಾನಡೆ ಭಾವಿಸಿದರು. ಆದ್ದರಿಂದ ಅವರು ೧೮೯೨ ರಲ್ಲಿ ಮಾಡಿದ "ಭಾರತದ ಅರ್ಥನೀತಿ" ಎಂಬ ತಮ್ಮ ಭಾಷಣದಲ್ಲಿ ಮಿಲ್ಲನ ಕಾಲದಿಂದೀಚೆಗೆ ಆರ್ಥಿಕ ಭಾವನೆಗಳು ಹೇಗೆ ಬೆಳೆದಿವೆ ಎಂದು ತೋರಿಸುವ ಪ್ರಯತ್ನ ನಡಸಿದರು : ಮೊದಮೊದಲು ಲೇಖಕರು ಅರ್ಥಶಾಸ್ತ್ರವನ್ನು, ಭೌತಶಾಸ್ತ್ರ ಮೊದಲಾದವುಗಳಂತೆ ತಾತ್ತ್ವಿಕ ಸತ್ಯಗಳ ಶಾಸ್ತ್ರವೆಂದು ಬಗೆದರು. ತಮ್ಮ ತತ್ತ್ವಗಳು ಮನುಷ್ಯರ ಸ್ಥಿತಿಯನ್ನು ಗಮನಕ್ಕೆ ತೆಗೆದುಕೊಂಡಿರಲಿಲ್ಲವೆಂಬುದನ್ನು ಅವರು ಸಾಕಷ್ಟು ಮಟ್ಟಿಗೆ ಅರಿಯಲಿಲ್ಲ. ಹಲವು ಭಾವಗಳು ಎಲ್ಲ ಕಾಲಕ್ಕೆ ಎಲ್ಲ ದೇಶಗಳಿಗೆ ಅನ್ವಯಿಸುವುದೆಂದು ಬಗೆದರು. ಆ ಭಾವನೆಗಳು ಯಾವ ಸಮಾಜಕ್ಕೂ ಅನ್ವಯಿಸುವಂತಿರಲಿಲ್ಲ. ಇಂಡಿಯದಲ್ಲಿರುವಂಥ ಸಮಾಜಕ್ಕಂತೂ ಅವು ಕೊಂಚವೂ ಪ್ರಮಾಣಭೂತವಾಗಿರಲಿಲ್ಲ. ರಾನಡೆ ನಮ್ಮ ಸಮಾಜದ ಸ್ಥಿತಿಯನ್ನು ವಿವರಿಸುತ್ತಾ ಹೇಳುತ್ತಾರೆ :

"ನಮ್ಮಲ್ಲಿ ಒಬ್ಬ ಸಾಮಾನ್ಯ ಮನುಷ್ಯನ ಸ್ಥಿತಿಯನ್ನು ನೋಡಿ, ಆತನು ಮಿತವ್ಯಯದ ರೀತಿಗೆ ತೀರ ವಿರುದ್ಧವಾಗಿದ್ದಾನೆ. ಜೀವನದಲ್ಲಿ ವ್ಯಕ್ತಿಯ ಸ್ಥಾನವನ್ನು ನಿರ್ಧರಿಸುವುದರಲ್ಲಿ ಆತನಿಗಿಂತ ಆತನ ಕುಟುಂಬವೂ ಜಾತಿಯೂ ಹೆಚ್ಚು ಬಲಯುತವಾಗಿವೆ. ಹಣವನ್ನು ಸಂಪಾದಿಸಬೇಕೆಂಬ ಆಸೆ ಇಲ್ಲದಿಲ್ಲ. ಆದರೆ ಅರ್ಥಸಂಪಾದನೆಯೊಂದೇ ಜೀವಿತದ ಗುರಿಯಾಗಿಲ್ಲ. ಕಟ್ಟಿಲ್ಲದ ಅಮಿತವಾದ ಸ್ಪರ್ಧೆಯಲ್ಲಿ ಜನರಿಗೆ ಇಷ್ಟವಿಲ್ಲ. ಸಂಪ್ರದಾಯವೂ ಕಾನೂನೂ ಸ್ಪರ್ಧೆಗಿಂತ ಬಲವಾಗಿವೆ; ಕರಾರಿನ ನಿಯಮಗಳಿಗಿಂತ ಮನುಷ್ಯರ ಅಂತಸ್ತು ಹೆಚ್ಚು ಪ್ರಭಾವಶಾಲಿಯಾಗಿದೆ. ಕೂಲಿಯಾಗಲಿ ಬಂಡವಾಳವಾಗಲಿ ಸುಲಭವಾಗಿ ಚಲಿಸುವುದಿಲ್ಲ, ಅವು ಸಾಹಸದಿಂದಲೂ ಜಾಣತನದಿಂದಲೂ ಕೂಡಿಲ್ಲ. ಕೂಲಿಯ ದರಗಳೂ

ಲಾಭಾಂಶಗಳೂ ನಿಕರವಾಗಿವೆ, ಸ್ಥಿತಿಗತಿಗಳ ಬದಲಾವಣೆಗಳಿಗೆ ತಕ್ಕಂತೆ ವ್ಯತ್ಯಾಸ ಹೊಂದುವುದಿಲ್ಲ. ಜನಸಂಖ್ಯೆಯ ಬೆಳವಣಿಗೆ ತನ್ನದೇ ಆದ ನಿಯಮವನ್ನು ಅನುಸರಿಸುತ್ತದೆ.... ಉತ್ಪಾದನೆಯೂ ವರೂ ಸ್ಥಾಯಿಯಾಗಿದೆ. ಒಂದು ವರ್ಷದ ಹೆಚ್ಚು ಬೆಳೆಯನ್ನು ಇನ್ನೊಂದು ವರ್ಷದ ಬರಕ್ಕೆ ಮೀಸಲಿಡಬೇಕಾಗಿದೆ. ಈ ರೀತಿಯಾಗಿ ವ್ಯವಸ್ಥಿತವಾಗಿರುವ ಸಮಾಜದಲ್ಲಿ ಸೂತ್ರರೂಪದ ಯಾವ ಪ್ರಮಾಣಗಳೂ ನಡೆಯಲಾರವು."

ಆಡಂಸ್ಮಿತ್‌ನಿಂದ ಈಚಿನ ನೂರು ವರ್ಷಗಳಲ್ಲಿ ಅರ್ಥಶಾಸ್ತ್ರ ಹೇಗೆ ಬೆಳೆದಿದೆಯೆಂಬುದನ್ನು ಸಂಗ್ರಹವಾಗಿ ತಿಳಿಸಿ, ಸರ್ವಕಾಲಕ್ಕೂ ಅನ್ವಯ ವಾಗುವ, ಬದಲಾವಣೆಯಾಗಲಾರದ ತತ್ತ್ವಗಳನ್ನು ಅರ್ಥಶಾಸ್ತ್ರ ವಿವರಿಸು ತ್ತದೆಯೆಂಬ ಹಳೆಯ ಲೇಖಕರ ಸಿದ್ಧಾಂತ ಇಂಗ್ಲೆಂಡಿನಲ್ಲೂ ಹೊರಗೂ ಹೇಗೆ ವಿಮರ್ಶೆಗೆ ಗುರಿಯಾಗಿದೆ ಎಂಬುದನ್ನು ವಿವರಿಸಿದ್ದಾರೆ.

ಹೀಗೆ ಹಳೆಯ ಅರ್ಥಶಾಸ್ತ್ರ ಲೇಖಕರು ಪ್ರತಿಪಾದಿಸುವ ತಾಟಸ್ಥ್ಯ ನೀತಿಯು (laissez-faire) ಸಾರ್ವತ್ರಿಕವಾಗಿ ಅನ್ವಯವಾಗತಕ್ಕದ್ದಲ್ಲ ವೆಂದು ತೋರಿಸಿದಮೇಲೆ, ರಾನಡೆಯವರು ಇಂಡಿಯದ ಆರ್ಥಿಕ ತೊಂದರೆ ಗಳಿಗೆ ಪರಿಹಾರ ರೂಪಕವಾಗಿರುವ ಕೈಗಾರಿಕಾಭಿವೃದ್ಧಿಯನ್ನು ಕೈಕೊಂಡು ವಿಸ್ತರಿಸುವುದರಲ್ಲಿ ಸರಕಾರಕ್ಕೆ ಯಾವ ರೀತಿಯ ಅಡ್ಡಿಯೂ ಇರಲಾರ ದೆಂದು ತೀರ್ಮಾನಿಸುತ್ತಾರೆ. ಸರಕಾರ ನ್ಯಾಯಶಿಸ್ತುಗಳ ಪಾಲನೆಯ ಕರ್ತವ್ಯಕ್ಕೆ ಮಾತ್ರ ಕಟ್ಟು ಬೀಳಲಾರದು. ರಾಷ್ಟ್ರದ ಎಲ್ಲ ಹಿತಗಳನ್ನು ಗಮನಿಸುವುದೂ ಅದರ ಕರ್ತವ್ಯವಾಗಿದೆ.

## ೧೦. ವೈಯಕ್ತಿಕ, ಸಾಂಸಾರಿಕ ಮತ್ತು ಧಾರ್ಮಿಕ ಜೀವನ

ರಾನಡೆಯವರ ವೈಯಕ್ತಿಕ ಮತ್ತು ಸಾಂಸಾರಿಕ ಜೀವನದ ಚಿತ್ರವನ್ನು ಈಗ ಗಮನಿಸೋಣ. ಅವರ ಪತ್ನಿ ಮರಾಠಿ ಶಿಕ್ಷಣದಲ್ಲಿ ತಕ್ಕ ಮಟ್ಟಿಗೆ ಮುಂದುವರೆದ ಮೇಲೆ ಇಂಗ್ಲಿಷನ್ನು ಕಲಿಯುವ ಅಪೇಕ್ಷೆಯನ್ನು ವ್ಯಕ್ತಪಡಿಸಿದರು. ರಾನಡೆಗೆ ಆಶ್ಚರ್ಯವಾಯಿತು. ತಮ್ಮ ಮನಸ್ಸಿನಲ್ಲೂ ಆ ಅಭಿಪ್ರಾಯ ಇದ್ದುದರಿಂದ ಸಂತೋಷವೂ ಆಯಿತು. ಇಂಗ್ಲಿಷ್ ಅಭ್ಯಾಸ ಆರಂಭವಾಗಿ ನಾಸಿಕದಲ್ಲಿರುವಾಗ ಮುಂದುವರೆಯಿತು. ಆಮೇಲೆ ರಾನಡೆ ಪತ್ನಿಗೆ ಓದಲು ಹೊಸ ಒಡಂಬಡಿಕೆಯನ್ನು (New Testament) ಕೊಟ್ಟರು. ರಮಾಬಾಯಿ ರಾನಡೆ ತಮ್ಮ "ನೆನಪುಗಳ"ಲ್ಲಿ ಪಾಠದ ರೀತಿಯನ್ನು ವಿವರಿಸುತ್ತಾರೆ. ರಾನಡೆ ಮೊದಲು ಆಕೆಯ ಕಾಗುಣಿತ (Spelling)ವನ್ನು ಪರೀಕ್ಷಿಸಿ ಅನಂತರ ಪದಗಳ ಅರ್ಥವನ್ನು ಕೇಳಿ ಆಮೇಲೆ ಪಾಠವನ್ನು ಓದಲು ಹೇಳುತ್ತಿದ್ದರು. ಓದುವುದಕ್ಕೆ ಬಾರದಿದ್ದರೆ ಸಿಟ್ಟುಗೊಳ್ಳುತ್ತಿದ್ದರು. ಆದರೆ ಅವರ ಸಿಟ್ಟಿನ ರೀತಿ ಬೇರೆ. ರೋಷದಿಂದ ಕೂಗುವುದಾಗಲಿ ಕಠಿನವಾಗಿ ಮಾತನಾಡುವುದಾಗಲಿ ಅವರ ರೀತಿಯಲ್ಲ. ವಿಷಾದದಿಂದ ಮೌನವಾಗಿ ಕುಳಿತು ಆಳವಾಗಿ ನಿಟ್ಟುಸಿರು ಬಿಡುವರು; ಕೆಲವು ಕಾಲ ಹೀಗೆ ಕಳೆಯುವರು. ಸಣ್ಣ ವಿಷಯಗಳಿಗೆ ಸಾಮಾನ್ಯವಾಗಿ ಕುಪಿತರಾಗುತ್ತಿರಲಿಲ್ಲ; ಕೋಪಗೊಂಡರೆ ಅದು ಹೆಚ್ಚು ಹೊತ್ತು ಇರುತ್ತಿತ್ತು. ಆದ್ದರಿಂದ ರಮಾಬಾಯಿ ಸಿಟ್ಟಿಗೆ ಅವಕಾಶ ಕೊಡದಂತೆ ಶ್ರಮವಹಿಸಿ ಅಭ್ಯಾಸ ಮಾಡುತ್ತಿದ್ದರು. ಪತಿ ವಿಷಾದಗೊಳ್ಳುವುದನ್ನು ಅವರು ಸಹಿಸಲಾರರು.

ರಾನಡೆಗೆ ತಕ್ಕ ಪತ್ನಿಯಾಗಬೇಕೆಂಬ ಇಚ್ಛೆಯಿಂದ ರಮಾಬಾಯಿ ಉತ್ಸಾಹದಿಂದ ಅಭ್ಯಾಸ ಮಾಡುತ್ತಿದ್ದರು. ಮನೆಯಲ್ಲಿ ಹತ್ತಿರದ ಬಂಧುಗಳು ಎಂಟೊಂಬತ್ತು ಮಂದಿ ಸ್ತ್ರೀಯರಿದ್ದರು. ಅವರಿಗೆಲ್ಲ ರಮಾಬಾಯಿಯ ಓದಿನ ಉತ್ಸಾಹವನ್ನು ಕಂಡು ಅಸಮಾಧಾನ. ಆಕೆಯ ವಿಚಾರದಲ್ಲಿ ನಿಷ್ಠುರವಾಗಿ ಮಾತನಾಡುವರು, ಕಠಿನವಾಗಿ ವರ್ತಿಸುವರು. ದಖನಿ

ರೈತರ ಪರಿಹಾರ ಕಾನೂನಿನ ಸಂಬಂಧದಲ್ಲಿ ರಾನಡೆ ಮೊದಲಬಾರಿ ಸಂಚಾರ ಹೊರಟಾಗ ಸ್ತ್ರೀ ಶಿಕ್ಷಣ ಕಾಲೇಜಿನ ಮಿಸ್ ಹರ್‌ಫರ್ಡ್ ಎಂಬಾಕೆಯನ್ನು ಇಂಗ್ಲಿಷ್ ಪಾಠ ಹೇಳಲು ವ್ಯವಸ್ಥೆ ಮಾಡಿ ಹೋದರು. ಮನೆಯ ಹೆಂಗಸರು ಇದರಿಂದ ರೊಚ್ಚಿಗೆದ್ದರು. ಪಾಠದ ಅನಂತರ ರಮಾಬಾಯಿ ಸ್ನಾನ ಮಾಡಿ ಬಟ್ಟೆ ಬದಲಾಯಿಸಬೇಕೆಂದರು. ಇಲ್ಲವಾದರೆ ಆಕೆ ಒಬ್ಬರೇ ತಮ್ಮ ಕೊಟಡಿಯಲ್ಲಿ ಕುಳಿತು ಪ್ರತ್ಯೇಕವಾಗಿ ಊಟಮಾಡಬೇಕಾಗುತ್ತಿತ್ತು. ೧೮೮೨ ರಲ್ಲಿ ಪುಣೆಯಲ್ಲಿ ಬಾಲಕಿಯರಿಗಾಗಿ ಒಂದು ಹೈಸ್ಕೂಲನ್ನು ಆರಂಭಿಸುವ ಸಂದರ್ಭದಲ್ಲಿ ಸಾರ್ವಜನಿಕ ಸಭೆ ಸೇರಿತ್ತು. ಆಗ ರಮಾಬಾಯಿ ಪತಿಯಿಂದ ಪ್ರಚೋದಿತರಾಗಿ ಇಂಗ್ಲಿಷಿನಲ್ಲಿ ಭಾಷಣವನ್ನು ಓದಿದರು. ಅದರಿಂದ ಮನೆಯಲ್ಲಿ ದೊಡ್ಡ ಕೂಗಾಟವೆದ್ದಿತು. ರಾನಡೆ ಮನೆಯ ಯಜಮಾನರಾಗಿ ಮನೆಯಲ್ಲಿ ನಡೆಯುವುದೆಲ್ಲ ಅವರಿಗೆ ಗೊತ್ತಿದ್ದರೂ ಮನೆಯ ಹಿರಿಯ ಹೆಂಗಸರನ್ನು ಗದರಿಸಲಿಲ್ಲ, ಅವರ ಮೂಢ ವರ್ತನೆಯನ್ನು ನಿಲ್ಲಿಸುವ ಪ್ರಯತ್ನವನ್ನೂ ಮಾಡಲಿಲ್ಲ. ಮರುತ್ತರ ಕೊಡದೆ ಒರಟಾಟ ಮಾಡದೆ ಅಥವಾ ಮೊಂಡಾಟವಾಡದೆ ಅವರು ಹೇಳಿದ ಕೆಲಸಗಳನ್ನೆಲ್ಲ ಮಾಡುವಂತೆ ಪತ್ನಿಗೆ ಆಜ್ಞೆ ಮಾಡಿದರು. ತಮ್ಮಂತೆ ಹೆಂಡತಿಯಲ್ಲೂ ಸಹನೆ ಸ್ವಾತಂತ್ರ್ಯ ಮನೋಭಾವಗಳು ಬೆಳೆಯಲೆಂದು ಅವರ ಅಭೀಷ್ಟವಿರಬಹುದು. ಇತರರು ತಮ್ಮನ್ನು ನಿಂದಿಸಿದರೆ, ತಪ್ಪು ತಿಳಿದುಕೊಂಡರೆ ರಾನಡೆ ತಿರಸ್ಕಾರಗೊಳ್ಳುತ್ತಿರಲಿಲ್ಲ, ತಾವು ಹಿಡಿದ ಮಾರ್ಗವನ್ನು ಬಿಡುತ್ತಲೂ ಇರಲಿಲ್ಲ. ರಾನಡೆಯವರ ದೊಡ್ಡ ಸಂಸಾರದಲ್ಲಿ ಅವರ ಹೆಂಡತಿ ಮಾತ್ರ ಅವರನ್ನು ಸರಿಯಾಗಿ ತಿಳಿದುಕೊಂಡಿದ್ದರು. ಸಂಸಾರದ ಈ ಸ್ಥಿತಿಯಿಂದ ರಾನಡೆಯವರ ಮನಸ್ಸಿಗೆ ಎಷ್ಟು ಹಿಂಸೆಯಾಗುತ್ತಿತ್ತು ಎಂಬುದನ್ನು ಅವರು ಮಲಬಾರಿಗೆ ಬರೆದ (೧೮೮೪) ಪತ್ರದಿಂದ ತಿಳಿಯಬಹುದು :

" ನಮಗೆ ಸಾಕಷ್ಟು ಧೈರ್ಯವಿಲ್ಲವೆಂದು, ಉತ್ಸಾಹವಿಲ್ಲವೆಂದು ಜನ ನಮ್ಮಲ್ಲಿ ತಪ್ಪೆಣಿಸುತ್ತಾರೆ, ನಮ್ಮನ್ನು ನಿಂದಿಸುತ್ತಾರೆ. ನಮ್ಮ ಮನೆಗಳಲ್ಲಿ ಬಂಧುಗಳೊಡನೆ, ಇಷ್ಟರಾದವರೊಡನೆ ಏನು ನಿರಂತರ ಹೋರಾಟ ನಡೆಯುತ್ತದೆ ಎಂಬುದನ್ನು ದೇವರೇ ಬಲ್ಲ. ನಮ್ಮ ಕೈಲಾದದ್ದನ್ನೆಲ್ಲ ಮಾಡಬೇಕೆಂದು ಒದ್ದಾಡುತ್ತೇವೆ, ಹೋರಾಡುತ್ತೇವೆ, ಆದರೆ ತುಯ್ತದಿಂದ ಎಲ್ಲಿ ಮುರಿಯುವೆವೊ ಎಂಬ ಭಯದಿಂದ ಅಲ್ಲಲ್ಲಿ ನಿಲ್ಲಬೇಕಾಗುತ್ತದೆ. "

ಹಣಕಾಸಿನ ಸಮಿತಿಯ ಕೆಲಸದ ಸಂದರ್ಭದಲ್ಲಿ, ೧೮೮೬ ರಲ್ಲಿ, ರಾನಡೆ

ಕಲ್ಕತ್ತೆಯಲ್ಲಿ ಕೆಲವು ಕಾಲ ನಿಲ್ಲಬೇಕಾಯಿತು. ಅಲ್ಲಿಗೆ ಹೋದ ತರುಣದಲ್ಲಿ ಒಂದು ಸಂಜೆ ತಮ್ಮ ಬಂಗಲೆಯ ತೋಟದಲ್ಲಿ ಹೆಂಡತಿಯೊಡನೆ ಕುಳಿತಿದ್ದರು. ಆಗ ಒಬ್ಬಾತ ಬಂಗಾಳೀ ಪತ್ರಿಕೆಗಳನ್ನು ತಂದನು. ಬಂಗಾಳಿ ಬರುತ್ತಿರಲಿಲ್ಲವಾದ್ದರಿಂದ ಪತ್ರಿಕೆ ಬೇಡ ಎಂದರು ರಮಾಬಾಯಿ. "ನೀನು ತಂದಿದ್ದೀಯೆ, ಆದ್ದರಿಂದ ತೆಗೆದುಕೊಳ್ಳುತ್ತೇವೆ. ಸೋಮವಾರದಿಂದ ಸರಿಯಾಗಿ ತಂದು ಕೊಡು" ಎಂದರು ರಾನಡೆ. ಆತ ಹೋದ ಮೇಲೆ ಹೆಂಡತಿಗೆ ಹೇಳಿದರು: "ಈ ಸ್ಥಳದಲ್ಲಿ ಮೂರು ನಾಲ್ಕು ತಿಂಗಳಿರುತ್ತ ಇಲ್ಲಿಯ ಭಾಷೆ ನನಗೆ ಬರುವುದಿಲ್ಲವೆಂದು ಹೇಳಲು ನಾಚಿಕೆಯಾಗುತ್ತದೆ" ಎಂದು. ರಾನಡೆಗೆ ಬಂಗಾಳಿ ಅಕ್ಷರಗಳು ಮಾತ್ರ ತಿಳಿದಿದ್ದವು, ಓದುವುದಕ್ಕೆ ಸರಿಯಾಗಿ ಬಾರದೆಂದು ತಿಳಿದ ರಮಾಬಾಯಿ ಚೇಷ್ಟೆಯಿಂದ "ನಾನು ಬಂಗಾಳಿಯನ್ನು ಕಲಿಯಬೇಕೆಂದಿದ್ದರೆ, ನೀವೇ ಹೇಳಿ ಕೊಡಿ. ಬೇರೆಯವರ ಹತ್ತಿರ ನಾನು ಕಲಿಯುವುದಿಲ್ಲ" ಎಂದರು. ರಾನಡೆ ಮನಸ್ಸಿಗೆ ಬೇಸರ ಮಾಡಿಕೊಳ್ಳಲಿಲ್ಲ. ಮರುದಿನ ಸ್ವಲ್ಪ ಹೊತ್ತಾಗಿ ಮನೆಗೆ ಬಂದರು. ಅವರೊಡನೆ ಒಬ್ಬ ಸಿಪಾಯಿ ಬಂಗಾಳೀ ಪುಸ್ತಕಗಳನ್ನು ಹೊತ್ತು ತಂದಿದ್ದ. ರಾನಡೆ ತಾವೇ ವ್ಯಾಪಾರಕ್ಕೆ ಹೊರಟದ್ದುದು ಇದೇ ಮೊದಲು. ಪುಸ್ತಕಗಳನ್ನು ಓದಲು ಪ್ರಯತ್ನಪಟ್ಟರು. ಆದರೆ ಸಾಧ್ಯವಾಗಲಿಲ್ಲ. ಭಾಷೆ ಮರೆತು ಹೋಗಿತ್ತು. ಆದ್ದರಿಂದ ಸಿಪಾಯಿಯನ್ನು ಕುರಿತು "ನಾನು ಊಟ ಮಾಡುತ್ತಿರುವಾಗ ಪೇಟೆಗೆ ಹೋಗಿ ಸ್ಲೇಟು ಬಳಪವನ್ನು ತೆಗೆದುಕೊಂಡು ಬಾ" ಎಂದು ಹೇಳಿದರು. ಊಟವಾದ ಮೇಲೆ ಸ್ಲೇಟಿನ ಮೇಲೆ ಅಕ್ಷರಗಳನ್ನೆಲ್ಲ ಬರೆದು ಓದುವುದನ್ನು ಅಭ್ಯಾಸ ಮಾಡಿದರು. ಮಾರನೆಯ ದಿವಸ ಬೆಳಗ್ಗೆ ಹೆಂಡತಿಗೆ ಅಕ್ಷರಾಭ್ಯಾಸ ಮಾಡಿಸಿದರು. ಕ್ಷೌರ ಮಾಡಿಸಿಕೊಳ್ಳುತ್ತಿದ್ದಾಗ ಪುಸ್ತಕ ಹಿಡಿದು ಗಟ್ಟಿಯಾಗಿ ಓದುತ್ತ ಸರಿಯಾದ ಉಚ್ಚಾರಣೆ ಹೇಗೆಂದು ನಾಪಿತನನ್ನು ವಿಚಾರಿಸುತ್ತಿದ್ದರು. ತನ್ನಿಂದ ರಾನಡೆಗೆ ಇಷ್ಟೆಲ್ಲ ತೊಂದರೆಯಾದದ್ದನ್ನು ಕಂಡು ರಮಾಬಾಯಿಗೆ ಪಶ್ಚಾತ್ತಾಪವಾಯಿತು. ಮೆಚ್ಚಿಕೆಯಿಂದ ರಾನಡೆಯನ್ನು ಗುರು ರಾಜನೆಂದು ಕರೆದರು. ರಾನಡೆ ಬಿಡುವಿಲ್ಲದ ತಮ್ಮ ಜೀವಿತದ ಜವಾಬ್ದಾರಿಗಳ ನಡುವೆ ಹೆಂಡತಿಗೆ ಹೇಳಿಕೊಡುವ ಉದ್ದೇಶದಿಂದ ವಿರಾಮ ಮಾಡಿಕೊಂಡು ಭಾಷೆಯನ್ನು ಕಲಿತರು. ಅದರ ಫಲವಾಗಿ ಸುಮಾರು ಒಂದು ತಿಂಗಳ ಅವಧಿಯಲ್ಲಿ

ರಮಾಬಾಯಿ ಬಂಗಾಳಿಯನ್ನು ಚೆನ್ನಾಗಿ ಓದಲು ಕಲಿತರು.

೧೮೭೮ ರಲ್ಲಿ ರಾನಡೆಗೆ ನಾಸಿಕಕ್ಕೆ ವರ್ಗವಾಯಿತು. ಅದೇ ಮೊದಲ ಬಾರಿಗೆ ರಮಾಬಾಯಿ ಮನೆಯ ಸಂಪೂರ್ಣ ಯಜಮಾನಿಯಾದರು. ಸುಮಾರು ಒಂದೂವರೆ ತಿಂಗಳ ಕಾಲ ಅಡಿಗೆಯವರು ಯಾರೂ ಸಿಕ್ಕಲಿಲ್ಲ. ರಮಾಬಾಯಿ ಪಾಕಶಾಸ್ತ್ರದಲ್ಲಿ ಅನನುಭವಿಯಾದ್ದರಿಂದ ತೊಂದರೆಗಿಟ್ಟುಕೊಂಡಿತು. ಈ ವಿಷಯವನ್ನು ತಮ್ಮ "ನೆನಪುಗಳ"ಲ್ಲಿ ತಮಾಷೆಯಾಗಿ ವರ್ಣಿಸಿದ್ದಾರೆ. ಅಡಿಗೆಗೆ ಉಪ್ಪು ಹಾಕುವುದನ್ನು ಮರೆತರೂ ಸರಿಯೆ, ಎರಡು ಬಾರಿ ಹಾಕಿದರೂ ಸರಿಯೆ, ರಾನಡೆ ಮಾತ್ರ ಸಿಟ್ಟುಗೊಳ್ಳುತ್ತಿರಲಿಲ್ಲ, ಆಕೆಯನ್ನು ಬೈಯುತ್ತಿರಲಿಲ್ಲ. ಒಂದು ದಿನ ಮನೆಗೆ ಬರುವಾಗ ಪಾಕ ಶಾಸ್ತ್ರದ ಪುಸ್ತಕವೊಂದನ್ನು ತಂದು ಕೊಟ್ಟು ಹೆಂಡತಿಗೆ "ಇನ್ನು ನೀನು ಮನಃಶಾಂತಿಯಿಂದಿರಬಹುದು" ಎಂದು ಹೇಳಿದರು.

ಮನೆಯ ಖರ್ಚಿಗೆ ಬೇಕಾಗುವ ಹಣವನ್ನು ಹೆಂಡತಿಯ ವಶಕ್ಕೇ ಕೊಡುವುದು ರಾನಡೆಯವರ ಪದ್ಧತಿ. ತಿಂಗಳ ಖರ್ಚಿಗೆ ಗೊತ್ತಾದ ಹಣವನ್ನು ಮೀರಿ ಒಂದು ಐದು ರೂಪಾಯಿಗಳನ್ನು ಸಹ ಆಕೆ ಗಂಡನ ಅನುಮತಿಯಿಲ್ಲದೆ ಖರ್ಚು ಮಾಡುತ್ತಿರಲಿಲ್ಲ. ಅವರವರ ಆರ್ಥಿಕ ಸಂಬಂಧಗಳು ಚೆನ್ನಾಗಿದ್ದುದರಿಂದ ಖರ್ಚಿಗಾಗಿ ಯಾವಾಗ ಹೆಚ್ಚಿನ ಹಣವನ್ನು ಕೇಳಿದರೂ ರಾನಡೆ ಇಲ್ಲವೆನ್ನುತ್ತಿರಲಿಲ್ಲ.

ನೋಡಲು ಬಂದವರಿಗೆ ರಾನಡೆ ಸುಲಭ ಸಾಧ್ಯರಾಗಿದ್ದರು. ತರುಣರನ್ನು ನೋಡಲು ಅವರಿಗೆ ಸದಾ ಇಷ್ಟವೇ. ತರುಣರ ಶಕ್ತಿ ಯೋಗ್ಯತೆಗಳನ್ನು ಕಂಡುಹಿಡಿದು ಸುಧಾರಣಾ ಕಾರ್ಯಗಳಲ್ಲಿ ಅವರನ್ನು ಉಪಯೋಗಿಸಿಕೊಳ್ಳಲು ಪ್ರಯತ್ನಪಡುತ್ತಿದ್ದರು. ಸರಕಾರದ ವರದಿಗಳನ್ನು ಕೊಟ್ಟು ಅವುಗಳನ್ನು ಸಂಗ್ರಹಿಸುವಂತೆ ಹೇಳಿ, ಆ ಮೂಲಕ ತರುಣರ ಶ್ರದ್ಧೆ ಸಾಮರ್ಥ್ಯಗಳನ್ನು ಪತ್ತೆ ಹಚ್ಚುತ್ತಿದ್ದರು.

ರಾನಡೆಯವರು ಕ್ಷಮಾಶೀಲರಾಗಿದ್ದರು. ಪ್ರಾರ್ಥನಾ ಸಮಾಜದ ಒಬ್ಬ ಮುಂದಾಳಿಗೂ ರಾನಡೆಯವರಿಗೂ ನಡೆದ ಒಂದು ಮಾತು ಕಥೆಯ ವಿಚಾರವನ್ನು ಗೋಖಲೆ ತಿಳಿಸುತ್ತಾರೆ. ಮಾತು ಒಬ್ಬ ಕೆಡುಕಿಗೆ ಸಂಬಂಧ ಪಟ್ಟದ್ದಾಗಿತ್ತು. ಮುಂದಾಳು ನಿಷ್ಠುರವಾಗಿ ನಿಬಂಧನೆಗಳಂತೆ ಆತನನ್ನು ಶಿಕ್ಷಿಸಬೇಕೆಂದು ಹೇಳುತ್ತಿದ್ದರೆ, ರಾನಡೆ ದಯೆಯಿಂದ ವರ್ತಿಸಬೇಕೆಂದೂ,

ತಪ್ಪಿತಸ್ಥನಿಗೆ ತಿದ್ದಿಕೊಳ್ಳಲು ಒಂದು ಅವಕಾಶಕೊಡಬೇಕೆಂದೂ ವಾದಿಸುತ್ತಿದ್ದರು.

ರಾನಡೆಯವರಲ್ಲಿ ಅಹಂಕಾರವಿರಲಿಲ್ಲ. ಇತರರು ನಿಂದಿಸಿದರೆ ಉದಾಸೀನರಾಗಿರುತ್ತಿದ್ದರು. ಜೀವನ ಚರಿತೆಯನ್ನು ಬರೆಯುವುದಾಗಿ ಮಾಂಕರ್ ಅವರು ರಾನಡೆಯ ಬಳಿ ಬಂದಾಗ ಆ ಕೆಲಸದಿಂದ ಅವರನ್ನು ತಿರುಗಿಸಲು ಸಾಧ್ಯವಾದದ್ದನ್ನೆಲ್ಲ ಮಾಡಿ, ಆ ಕಾಲದ ಚರಿತ್ರೆಯನ್ನು ಬರೆಯುವಂತೆ ಸಲಹೆ ಮಾಡಿದರು. ತಮ್ಮನ್ನು ಕುರಿತು ಯಾರಾದರೂ ಸ್ತೋತ್ರ ಮಾಡಲು ಆರಂಭಿಸಿದರೆ—ಅದಿರಲಿ, ನನ್ನ ಬಗ್ಗೆ ವಿಮರ್ಶಕರು ಹೇಳುವುದನ್ನು ಕೇಳಲಿಚ್ಛಿಸುತ್ತೇನೆ,—ಎನ್ನುತ್ತಿದ್ದರು. ಸಮಿತಿಯ ಸಭೆಯೊಂದರಲ್ಲಿ ಟಿಳಕರು ರಾನಡೆಯುವರನ್ನು ರೋಷದಿಂದ ಖಂಡಿಸಿದರು. ರಾನಡೆಯೂ ರೋಷದಿಂದ ಉತ್ತರ ಕೊಡುವರೆಂದು ಎಲ್ಲರೂ ನಿರೀಕ್ಷಿಸಿದ್ದರು. ಆದರೆ ಅವರು ಟಿಳಕರ ಭಾಷಣ ಮುಗಿದ ಕೂಡಲೆ, "ಬಳವಂತ್, ಬನ್ನಿ. ನನ್ನ ಪಕ್ಕದಲ್ಲಿ ಬಂದು ಕುಳಿತುಕೊಳ್ಳಿ. ನಾನೇನು ತಪ್ಪಿ ನಡೆಯದವನಲ್ಲ. ನನ್ನ ಅಭಿಪ್ರಾಯವನ್ನು ವಿವರಿಸಿ ಹೇಳುತ್ತೇನೆ, ಕೇಳಿ; ಆಮೇಲೆ ಎಲ್ಲಿ ತಪ್ಪಿದೆ ಎಂಬುದನ್ನು ಹೇಳಿ, ನಾನು ತಿದ್ದಿಕೊಳ್ಳುತ್ತೇನೆ"—ಎಂದು ಹೇಳಿದರು. ರಾನಡೆಯವರಲ್ಲಿ ಕಾವೂ ವೀರತನವೂ ಇಲ್ಲದಿದ್ದುದರಿಂದ ದೀನತೆಯಿಂದ ವರ್ತಿಸುತ್ತಿದ್ದರೆಂದು ಕೆಲವರು ಹೇಳುತ್ತಾರೆ. ಅವರು ಚಿಕ್ಕಂದಿನಲ್ಲಿ ಸಿಟ್ಟಿಗೇಳುತ್ತಿದ್ದ ಸಂದರ್ಭಗಳುಂಟು, ಆದರೆ ತಮ್ಮನ್ನು ಹತೋಟಿಗೆ ತಂದುಕೊಂಡರು. ಕ್ರೋಧ ಬಂದಾಗ ತಮ್ಮ ಕೊಠಡಿಯ ಬಾಗಿಲನ್ನು ಮುಚ್ಚಿಕೊಂಡು ಸಿಟ್ಟು ಇಳಿಯುವ ವರೆಗೂ ಅಲ್ಲಿ ಇರುತ್ತಿದ್ದರು.

ರಾನಡೆ ಹೆಚ್ಚಾಗಿ ಓದಿದ್ದರು, ಅನೇಕ ಪತ್ರಿಕೆಗಳನ್ನು ಓದುತ್ತಿದ್ದರು, ಜೀವನದ ಮತ್ತು ಮಾನವ ಸ್ವಭಾವದ ಪರಿಚಯ ಚೆನ್ನಾಗಿತ್ತು. ಆದ್ದರಿಂದ ಅವರ ಸಂಭಾಷಣೆ ಸ್ವಾರಸ್ಯವಾಗಿರುತ್ತಿತ್ತು. ಅವರದು ದೊಡ್ಡ ಮನಸ್ಸು. ಭಿನ್ನಾಭಿಪ್ರಾಯವುಳ್ಳವರನ್ನು ನಿಂದಿಸುವುದಾಗಲಿ, ಅವರ ಮೇಲೆ ದುರಭಿಪ್ರಾಯಗಳನ್ನು ಹೊರಿಸುವುದಾಗಲಿ ಅವರಿಗೆ ಸೇರುತ್ತಿರಲಿಲ್ಲ. ಆ ರೀತಿ ನಡೆಯುವವರಿಗೆ ಅವರು ಉತ್ತೇಜನ ಕೊಡುತ್ತಲೂ ಇರಲಿಲ್ಲ. ಸಾಮಾನ್ಯವಾಗಿ ಹೆಚ್ಚು ಮಾತನಾಡುವವರಲ್ಲ. ಆದರೆ ಯಾವುದಾದರೂ ವಿಷಯವನ್ನೆತ್ತಿದರೆ, ಕೇಳುವವರಿಗೆ ಆಸಕ್ತಿ ಇದೆಯೆಂದು ತೋರಿದರೆ, ಮನ

ಬಿಚ್ಚಿ ಮಾತಾಡುತ್ತಿದ್ದರು. ಅವರೊಡನೆ ಮಾತಾಡುತ್ತಿದ್ದರೆ ಅವರ ಭಾವಗಳ ಪ್ರಭಾವ ಕೇಳುವವರನ್ನು ಮುಗ್ಧಗೊಳಿಸುತ್ತಿತ್ತು.

ರಾನಡೆಯವರ ಧ್ವನಿ ಗಂಭೀರವಾಗಿ ಸ್ಪಷ್ಟವಾಗಿತ್ತು. ಅವರು ಸ್ವಚ್ಛವಾದ ಭಾಷಣಕಾರರು, ಆದರೆ ವಾಗ್ಮಿಯಲ್ಲ. ವಿದ್ಯುತ್ಪ್ರವಾಹದಂತೆ ಭಾಷಣ ಹರಿಸಬಲ್ಲವರಾಗಿರಲಿಲ್ಲ. ಸುರೇಂದ್ರನಾಥ ಬ್ಯಾನರ್ಜಿಯವರಂತೆ ಕಿಡಿ ಕೆದರುವ ಶಕ್ತಿಯಿರಲಿಲ್ಲ. ಆದರೆ ಕೇಳುವ ಜನ ಮನಸ್ಸಿಟ್ಟು ಕೇಳುವಂತೆ ಮಾತಾಡಬಲ್ಲವರಾಗಿದ್ದರು; ಸಭಿಕರ ಮನಸ್ಸನ್ನು ಕಲಕಬಲ್ಲವರಾಗಿದ್ದರು. ಮಾತಾಡುವಾಗ ಸಾಮಾನ್ಯವಾಗಿ ಅಂಗ ವಿನ್ಯಾಸಗಳನ್ನು ಮಾಡುತ್ತಿರಲಿಲ್ಲ; ಒಂದು ಕೈಯನ್ನು ಮೇಜಿನ ಮೇಲೆ ಇಡುತ್ತಿದ್ದರು, ಇನ್ನೊಂದರಿಂದ ಕಣ್ಣನ್ನು ಉಜ್ಜುತ್ತಿದ್ದರು. ರಾನಡೆ ತಮ್ಮೊಡನೆಯೇ ತಾವು ಚರ್ಚಿಸುತ್ತಿರುವರೇನೋ ಎಂಬಂತೆ, ಸಂಶಯದಿಂದ ಮುಗ್ಗರಿಸುತ್ತಿರುವವರಂತೆ, ಒಂದು ರೀತಿಯ ಜಡತೆಯಿಂದ ತಮ್ಮ ಭಾಷಣವನ್ನು ಆರಂಭಿಸುತ್ತಿದ್ದರು—ಎಂದು ಮಲಬಾರಿ ಹೇಳುತ್ತಿದ್ದರು. ಆದರೆ ಆರಂಭಿಸಿದ ಅಲ್ಪ ಕಾಲದಲ್ಲಿಯೆ ತಮ್ಮ ಭಾವಗಳಿಂದ ಹುರುಪುಗೊಂಡವರಂತೆ ಚಟುವಟಿಕೆಯಾಗಿ, ಸಿದ್ಧವಾದ ಮಾತುಗಳಲ್ಲಿ ನಿರ್ಮಲ ಭಾವಗಳನ್ನು ತುಂಬುತ್ತಾ, ಶ್ರೋತೃಗಳನ್ನು ತಮ್ಮೊಡನೆ ಸೆಳೆದುಕೊಂಡು—ಬಿಸಿ ತಗುಲಿದ ಮೋಟರು ಎಂಜಿನಿನಂತೆ—ಮುಂದೆ ಸಾಗುವರು. ಸ್ವಚ್ಛವಾದ ಮನಸ್ಸು, ತಿಳಿವಳಿಕೆ, ಸ್ವತಂತ್ರ ಮನೋಭಾವ, ಪ್ರಾಮಾಣಿಕತೆ, ವಾಗರ್ಥಗಳ ಒಂದು ಔನ್ನತ್ಯ, ವಿಷಯಗಳನ್ನು ಹೊಸ ಬೆಳಕಿನಲ್ಲಿ ಮೂಡಿಸುವ ಶಕ್ತಿ—ಈ ಗುಣಗಳು ಪ್ರಾಯಶಃ ರಾನಡೆಯವರ ಭಾಷಣಗಳ ಶಕ್ತಿ ಮೂಲಗಳು.

ರಾನಡೆ ಅಂಗವ್ಯಾಯಾಮದ ಅಭ್ಯಾಸಗಳನ್ನು ಇಟ್ಟುಕೊಂಡಿರಲಿಲ್ಲ. ಹವಾ ಚೆನ್ನಾಗಿದ್ದಾಗ, ಬೆಳಗಿನ ಹೊತ್ತು ಅಥವಾ ಸಂಜೆ, ಇಬ್ಬರು ಮೂವರು ಸ್ನೇಹಿತರನ್ನೊಡಗೊಂಡು ನಾಲ್ಕೈದು ಮೈಲಿಗಳ ದೂರ ಸಂಚಾರ ಹೋಗುತ್ತಿದ್ದರು. ಈ ಸಂದರ್ಭಗಳಲ್ಲಿ ಪ್ರಚಲಿತ ಸಮಸ್ಯೆಗಳನ್ನು ಚರ್ಚಿಸುತ್ತ ನಡೆಯುವುದು ವಾಡಿಕೆಯಾಗಿತ್ತು. ಅಪರೂಪವಾಗಿ ಚದುರಂಗ ಅಥವಾ ಸೊಂಗಟ್ಯಾವನ್ನು ಆಡುತ್ತಿದ್ದರು. ಬೇಸರವಾದರೆ ಒಂದು ವಿಷಯವನ್ನು ಬಿಟ್ಟು ಬೇರೊಂದು ವಿಷಯವನ್ನು ನೋಡುತ್ತಿದ್ದರು: ಅರ್ಥ ಶಾಸ್ತ್ರದಿಂದ ತತ್ತ್ವಶಾಸ್ತ್ರಕ್ಕೆ, ತತ್ತ್ವಶಾಸ್ತ್ರದಿಂದ ರಾಜ್ಯಶಾಸ್ತ್ರಕ್ಕೆ, ರಾಜ್ಯಶಾಸ್ತ್ರದಿಂದ

ಸಮಾಜಶಾಸ್ತ್ರಕ್ಕೆ, ಅದೂ ಬೇಡವೆನಿಸಿದಾಗ ತಮ್ಮ ಪ್ರಿಯವಾದ ಚರಿತ್ರೆಯ ಪುಸ್ತಕಗಳಿಗೆ ತಿರುಗುತ್ತಿದ್ದರು.

ಪ್ರಕೃತಿ ದೃಶ್ಯಗಳಲ್ಲಾಗಲಿ ಸಂಗೀತ ನಾಟಕಗಳಲ್ಲಾಗಲಿ ಅವರಿಗೆ ಅಭಿರುಚಿ ಇದ್ದಂತೆ ತೋರುವುದಿಲ್ಲ. ಆದರೆ ಸಂಗೀತ ಭಕ್ತಿಗೆ ಪೋಷಕ ವೆಂಬುದನ್ನು ಅರಿತು ಪ್ರಾರ್ಥನಾ ಸಮಾಜದಲ್ಲಿ ಅದನ್ನು ಆಚರಣೆಗೆ ತಂದರು. ಷೇಕ್ಸ್‌ಪಿಯರನ ನಾಟಕಗಳೂ ಸ್ಕಾಟನ ಕಾದಂಬರಿಗಳೂ ಅವರಿಗೆ ಪರಿಚಿತವಾಗಿದ್ದವು. ಎಮರ್ಸನ್ನನ ಕೃತಿಗಳಲ್ಲಿ ಅವರಿಗೆ ವಿಶೇಷ ಅಭಿರುಚಿ.

ಅವರ ಜೀವನದ ರೀತಿ ಸರಳವಾಗಿತ್ತು. ಉಡುಪಿನಲ್ಲಾಗಲಿ ಜೀವನದ ರೀತಿಗಳಲ್ಲಾಗಲಿ ಅವರು ಯುರೋಪಿಯನ್ನರನ್ನು ಅನುಕರಿಸು ತ್ತಿರಲಿಲ್ಲ. ರಗ್ಗಿನ ಮೇಲೆ ಕುಳಿತು ತೊಡೆಯ ಮೇಲೋ, ಕಾಲುಮಣೆಯ ಮೇಲೋ ಕಾಗದವನ್ನಿಟ್ಟುಕೊಂಡು—ಒಮ್ಮೊಮ್ಮೆ ತುಕಾರಾಮನ ಹಾಡು ಗಳನ್ನು ಹಾಡುತ್ತ—ಗರಿಯ ಪೇನಾದಿಂದ ಬರೆಯುವುದು ಅವರ ವಾಡಿಕೆ. ಭೇಟಿಗಾಗಿ ಬಂದ ಜನ ಸಹ ಅವರನ್ನು ಇದೇ ರೀತಿಯ ಆವರಣದಲ್ಲಿ ಕಾಣುತ್ತಿದ್ದರು. ಉಡಿಗೆ ತೊಡಿಗೆಯ ವಿಚಾರದಲ್ಲಿ ಬಹು ಉದಾಸೀನ ರಾಗಿರುತ್ತಿದ್ದರು. ನ್ಯಾಷನಲ್ ಕಾಂಗ್ರೆಸ್ಸಿನ ಸಭೆಗಳಲ್ಲಿ ಅಧ್ಯಕ್ಷರ ಬಳಿ ಯಲ್ಲಿಯೇ ಕುಳಿತು, ಚರ್ಚೆಗಳು ಹಿಡಿಸದಿದ್ದಾಗ ಇಷ್ಟವಾದ ಪುಸ್ತಕವನ್ನು ಕಣ್ಣಿನ ಹತ್ತಿರವೇ ಇಟ್ಟುಕೊಂಡು ಓದುತ್ತ ಕೂರುವರು. ಕಿವಿಯಲ್ಲಿ ಸಿಕ್ಕಿಸಿದ ಪೆನ್ಸಿಲನ್ನು ಆಗಾಗ ತೆಗೆಯುವರು. ಹಳೇ ಕಾಲದ, ಒರಟಾದ ಖದ್ದರ್ ಬಟ್ಟೆಗಳನ್ನೇ ಏಕೆ ತೊಡುತ್ತೀರಿ ಎಂದು ಯಾರೋ ಕೇಳಿದ್ದಕ್ಕೆ, ನಮ್ಮ ದೇಶದಲ್ಲಿ ಉತ್ತಮವಾದ ಬಟ್ಟೆ ತಯಾರಾಗುವವರೆಗೂ ಅದನ್ನೇ ಉಪಯೋಗಿಸುವುದಾಗಿ ಹೇಳಿದರು.

ರಾನಡೆ ಸುಂದರ ಪುರುಷರೇನಲ್ಲ. ಆದರೆ ದೃಢವಾದ ಕಾಯ, ಎತ್ತರ ವಾದ ನಿಲುವು, ದೊಡ್ಡ ಶಿರಸ್ಸು—ಇವುಗಳಿಂದ ಕೂಡಿ ಗಂಭೀರವಾಗಿ ಕಾಣುತ್ತಿದ್ದರು. ಅವರ ಮುಖದ ಒಟ್ಟು ಆಕಾರಕ್ಕೆ ಹಣೆ ತೀರ ಅಗಲ ವಾಗಿ ಎತ್ತರವಾಗಿದ್ದು ಮೂಗು ಚಿಕ್ಕದಾಗಿತ್ತು. ಮೈಬಣ್ಣ ಚೆನ್ನಾಗಿತ್ತು. ಮುಖದ ಅಭಿವ್ಯಕ್ತಿಯಲ್ಲಿ ಕಳೆಯಿತ್ತು. ಅವರ ಮೇಲ್ದುಟಿ ಬಾಯಿಗ ಳನ್ನು ಪೊದೆಯಾಗಿ ಬೆಳೆದ ಮೀಸೆ ಮುಚ್ಚಿತ್ತು. ಅವರ ಬಲಗಣ್ಣು

ನೋಟಕ್ಕೆ ಪ್ರಯೋಜನವಾಗಿರಲಿಲ್ಲ; ಎಡಗಣ್ಣೂ ಸರಿಯಾಗಿರಲಿಲ್ಲ, ಆದರೂ ಕಡೆಯವರೆಗೂ ಅದು ಸೇವೆ ಸಲ್ಲಿಸಿತು. ಕಡೆ ಕಡೆಯಲ್ಲಿ ಅವರಿಗೆ ಕಿವಿಯೂ ಸರಿಯಾಗಿ ಕೇಳಿಸುತ್ತಿರಲಿಲ್ಲ.

ರಾನಡೆಯವರ ಧರ್ಮಶ್ರದ್ಧೆ ಭಕ್ತಿಗಳು ನೈಜವಾದುವು. ಅವು ಅವರ ವ್ಯಕ್ತಿತ್ವದ ಜೀವಾಳ. ಅವರ ಮುಖ್ಯ ಭಾವನೆಗಳು ಸುಲಭವಾಗಿ ಧಾರ್ಮಿಕವಾದ ರೂಪವನ್ನು ತಳೆದು ಹೊರಹೊಮ್ಮುತ್ತಿದ್ದವು. ಧಾರ್ಮಿಕವಾದ ಭಾವನೆಗಳಿಂದ ಅವರ ಹೃದಯ ಕಾವೇರುತ್ತಿತ್ತು. ೧೮೯೬ ರಲ್ಲಿ ಒಂದು ದಿನ ಅವರು ಪೂನಾ ಲೈಬ್ರರಿಯಲ್ಲಿ ಓದುತ್ತ ಕುಳಿತಿದ್ದಾಗ, ಯಾತ್ರಿಕರ ಗುಂಪೊಂದು ಜ್ಞಾನೋಬ ತುಕಾರಾಮರ ಪಾದಗಳನ್ನಿಟ್ಟಿದ್ದ ಪಲ್ಲಕ್ಕಿಯನ್ನು ಹೊತ್ತು ವಿಠೋಬ ದೇವಸ್ಥಾನಕ್ಕೆ ಮೆರವಣಿಗೆಯಲ್ಲಿ ಹೋಗುತ್ತಿತ್ತು ಯಾತ್ರಿಕರ ಪದಗಳನ್ನು ಕೇಳಿ ರಾನಡೆ ಪಕ್ಕದಲ್ಲಿದ್ದ ಸ್ನೇಹಿತರನ್ನೂ ಕರೆದು ಮೆರವಣಿಗೆಯನ್ನು ನೋಡಲು ಹೊರಗೆ ಇಣುಕಿದರು. ಅವರ ಹೃದಯ ಭಕ್ತಿ ಭಾವದಿಂದ ತುಂಬಿ ಗಂಟಲು ಕಟ್ಟಿತ್ತು, ಕಣ್ಣುಗಳು ಒದ್ದೆಯಾಗಿದ್ದವು.

ದೃಢವಾದ ದೈವ ಭಕ್ತಿಯೇ ರಾನಡೆಯವರ ಎಲ್ಲ ಗುಣಗಳಿಗೂ ಮೂಲವಾಗಿತ್ತು. ದೇವರು ಸದಾ ಒಂದು ಕೊಳವಿಯ ಮೂಲಕ ಮಾತಾಡುತ್ತಿರುವಂತೆಯೂ ಅದನ್ನು ತಾವು ಕೇಳುತ್ತಿರುವಂತೆಯೂ ಭಾಸವಾಗುತ್ತದೆಯಾಗಿ ರಾನಡೆ ಒಮ್ಮೆ ಹೇಳಿದರಂತೆ. ಸರ್ ನಾರಾಯಣ ಚಂದಾವರ್ಕರ್ ಇನ್ನೊಂದು ಸಂಗತಿಯನ್ನು ತಿಳಿಸುತ್ತಾರೆ. ಸಮಾಜ ಸುಧಾರಣೆಯ ವಿಷಯವಾಗಿ ವಾಗ್ವಾದಗಳು ನಡೆಯುತ್ತಿದ್ದಾಗ ಜನರು ರಾನಡೆಯನ್ನು ಮನೆಯ ಶಾಂತಿ ವಾತಾವರಣವನ್ನು ಕೆಡಿಸಿದವರೆಂದು ದೂಷಿಸುತ್ತಿದ್ದರು. ಆಗ ಪಾರಸೀ ಸ್ನೇಹಿತರೊಬ್ಬರು ರಾನಡೆಯನ್ನು ಕುರಿತು—ಈ ಧಾರ್ಮಿಕ ಸುಧಾರಣೆಯನ್ನು ಬಿಟ್ಟುಬಿಡಿ; ಪ್ರಪಂಚದಲ್ಲಿ ಮಾಡಬೇಕಾದ ಕೆಲಸ ಬೇರೆ ಎಷ್ಟೋ ಇದೆ—ಎಂದು ಹೇಳಿದರು. ಅದಕ್ಕೆ ರಾನಡೆ—"ಇದು ಧರ್ಮಗಳ ದೇಶ. ಒಳ್ಳೆಯದಾಗಲಿ ಕೆಟ್ಟದಾಗಲಿ ನಾವು ಮತ ಧರ್ಮವನ್ನು ಬಿಟ್ಟಿರಲಾರೆವು. ಧಾರ್ಮಿಕ ಭಾವಗಳು ನಮ್ಮ ರಕ್ತಗತವಾಗಿವೆ. ನಾವು ಧರ್ಮವನ್ನು ಬಿಟ್ಟು ಓಡಲೆಳಸಿದರೂ ಅದು ನಮ್ಮನ್ನು ಬಿಡುವುದಿಲ್ಲ"—ಎಂದರಂತೆ.

ದೇವರ ದಯೆ ನಮ್ಮ ಮೇಲಿದೆಯೆಂಬ ವಿಷಯದಲ್ಲಿ ಅವರಿಗೆ ಸಂಪೂರ್ಣ ನಂಬಿಕೆಯಿತ್ತು. ಚರಿತ್ರೆಯ ಘಟನೆಗಳಲ್ಲಿ ದೇವರ ಕೈವಾಡವನ್ನು ಅವರು ಸೂಚಿಸಿರುವ ರೀತಿಯಲ್ಲಿ ಇದು ವ್ಯಕ್ತವಾಗುತ್ತದೆ. ಸ್ವಂತ ವಿಷಯಗಳಲ್ಲಿ ಸಹ ಅವರಿಗೆ ಇದೇ ಬಗೆಯ ನಂಬಿಕೆಯಿತ್ತು. ೧೮೯೧ ರಲ್ಲಿ ಕಾಹಿಲೆಯಾಗಿ ದೂರದ ಸ್ಥಳದಲ್ಲಿ ಮೃತ್ಯುಮುಖದಲ್ಲಿದ್ದಾಗ, ಇವರ ಬಳಿಯಲ್ಲಿ ಇವರ ಹೆಂಡತಿಯೊಬ್ಬರೇ ಕುಳಿತು, ದುಃಖಪರಿಸ್ಥಿತಿಯ ಭಾರವನ್ನು ತಡೆಯಲಾರದೆ, ಅಳಲಾರಂಭಿಸಿದರು. ಆಗ ಹೆಂಡತಿಯನ್ನು ಸಮಾಧಾನ ಮಾಡುತ್ತಾ "ಹೆದರಬೇಡ, ದೇವರು ನಿನ್ನ ಜೊತೆಯಲ್ಲಿದ್ದಾನೆ" ಎಂದು ನುಡಿದರು.

ಪ್ರಾರ್ಥನಾ ಸಮಾಜದ ಹೆಸರನ್ನು ಬ್ರಾಹ್ಮೋ ಸಮಾಜವೆಂದು ಬದಲಾಯಿಸಬೇಕೆಂಬ ಸಲಹೆ ಬಂದಿತ್ತು ೧೮೯೧ ರಲ್ಲಿ. ರಾನಡೆ ಸಲಹೆಯನ್ನು ಎದುರಿಸಿದರು. ಪ್ರಾರ್ಥನೆ ಮನುಷ್ಯನ ಮುಖ್ಯ ಕರ್ತವ್ಯವೆಂದೂ ದೇವರನ್ನು ಸೇರಲು ಅದೇ ಮಾರ್ಗವೆಂದೂ ತಿಳಿದಿರುವ ಸಂಘದ ಹೆಸರು ಪ್ರಾರ್ಥನಾ ಸಮಾಜವೆಂದೇ ಇರಬೇಕೆಂದು ತಿಳಿಸಿದರು. ಭಾಷಣ ಮಾಡಲು ಎದ್ದಾಗ ರಾನಡೆ ಸಾಮಾನ್ಯವಾಗಿ ಕೊಂಚ ಹೊತ್ತು ಕಣ್ಣು ಮುಚ್ಚಿ ಸುಮ್ಮನೆ ನಿಲ್ಲುತ್ತಿದ್ದರು. ಅವರು ಆಗ ಪ್ರಾರ್ಥನೆಯಲ್ಲಿ ಇರುತ್ತಿದ್ದರೆಂದು ಬಹು ಜನರಿಗೆ ತಿಳಿಯದು.

ರಮಾಬಾಯಿ ರಾನಡೆ ತಮ್ಮ "ನೆನಪುಗಳು" ಗ್ರಂಥದಲ್ಲಿ ಪತಿಯ ಧಾರ್ಮಿಕ ಮನೋವೃತ್ತಿಯನ್ನು ಕುರಿತ ಅನೇಕ ಸಂಗತಿಗಳನ್ನು ತಿಳಿಸುತ್ತಾರೆ. ರಾನಡೆ ಹೊತ್ತಿಗೆ ಮುಂಚೆಯೇ ಎದ್ದು ಮರಾಠೀ ಸಾಧುಸಂತರ ಅದರಲ್ಲೂ ತುಕಾರಾಮನ ಪದಗಳನ್ನು ಹಾಡಲಾರಂಭಿಸುವರು. ಪದಗಳನ್ನು ಹೇಳುತ್ತ ಅರ್ಥವನ್ನು ಸವಿಯುತ್ತ ಧ್ಯಾನಮಗ್ನರಾದಾಗ ಅವರ ಮುಖದ ಮೇಲೆ ದಿವ್ಯಭಾವ ತೋರಿಬರುತ್ತಿದ್ದದ್ದನ್ನು ರಮಾಬಾಯಿ ಕಾಣುವರು. ಒಮ್ಮೊಮ್ಮೆ ರಮಾಬಾಯಿ ಪುಸ್ತಕ ತೆಗೆದುಕೊಂಡು ಪದಗಳನ್ನು ಓದುವರು, ರಾನಡೆ ಅವುಗಳನ್ನು ಹಾಡುವರು, ಇಲ್ಲವೆ ತಾಳ ಹಾಕುತ್ತ, ಅರ್ಥದಲ್ಲಿ ಮಗ್ನರಾಗಿ ಕೇಳುವರು. ತಮಗೆ ತುಂಬ ಇಷ್ಟವಾದ ಪದವಾದರೆ ರಮಾಬಾಯಿಗೆ ಪುನಃ ಪುನಃ ಓದುವಂತೆ ಹೇಳುವರು. ತಾವು ಅದನ್ನು ಕೇಳುತ್ತ ಭಾವವನ್ನು ಸವಿಯುತ್ತ ಓಲಾಡುವರು. ಆಗ ಅವರ ಮುಖ ದಿವ್ಯ

ಪ್ರೇಮ ಭಾವದಿಂದ ಕೂಡಿ ಸಂತಸದಿಂದ ತುಳುಕುತ್ತಿತ್ತೆಂದು ರಮಾಬಾಯಿ ತಿಳಿಸುತ್ತಾರೆ. ಕೆಲವು ವೇಳೆ ಭಾವದಿಂದ ಮನಕರಗಿ ಕಣ್ಣುಗಳು ನೀರಿನಿಂದ ತುಂಬುತ್ತಿದ್ದವು. ಅಂಥ ಸಂದರ್ಭಗಳಲ್ಲಿ ರಮಾಬಾಯಿಯವರ ಮನಸ್ಸಿನಲ್ಲಿ ಪತಿಯ ವಿಷಯದಲ್ಲಿ ಪ್ರೇಮ ಗೌರವಗಳು ಉಕ್ಕಿ ಬರುತ್ತಿದ್ದವು. ತಮ್ಮನ್ನು ಉದ್ಧಾರ ಮಾಡುವ ದಿವ್ಯ ಶಕ್ತಿಯೊಂದನ್ನು ಪತಿಯಲ್ಲಿ ಕಾಣುತ್ತಿದ್ದರು.

ಒಮ್ಮೊಮ್ಮೆ ಹೊಂದದ ರಾಗಗಳನ್ನು ಹಾಕಿ ರಾನಡೆ ಹಾಡುತ್ತಿದ್ದರು. ಆಗ ರಮಾಬಾಯಿ ನಗುತ್ತ ಅವರು ಕಂಡುಹಿಡಿದ ಹೊಸ ರಾಗಗಳನ್ನು ನಮೂದಿಸಿಟ್ಟುಕೊಳ್ಳಬೇಕೆಂದು ಹೇಳುವರು. ಅದಕ್ಕೆ ರಾನಡೆ—" ನಾವು ಕಲೆ ಗಿಲೆಯನ್ನು ತಿಳಿಯದ ಜನ, ನಮಗೆ ರಾಗ ತಾಳಗಳು ತಿಳಿಯವು. ಆದರೆ ನಾವು ಹೇಳಿದ್ದೆಲ್ಲ ದೇವರಿಗೆ ತಿಳಿಯುತ್ತದೆ. ನಮ್ಮ ದೋಷಗಳನ್ನು ಅವನು ಗಮನಿಸುವುದಿಲ್ಲ "—ಎಂದು ಉತ್ತರಿಸುವರು.

ಯಾವ ಸಂದರ್ಭವಾದರೂ ಇರಲಿ ಪ್ರಾರ್ಥನೆಯಿಂದಲೇ ದಿನ ಆರಂಭವಾಗಬೇಕು ರಾನಡೆಗೆ. ೧೮೯೭ ರಲ್ಲಿ ಅಮರಾವತಿ ಸಮ್ಮೇಳನದಿಂದ ವಾಪಸು ಬರುತ್ತಿದ್ದಾಗ ರೈಲಿನಲ್ಲಿ ಜಿ. ಕೆ. ಗೋಖಲೆಯವರು ಜೊತೆಗಿದ್ದರು. ಆ ಗಾಡಿಯಲ್ಲಿ ಅವರಿಬ್ಬರೇ ಇದ್ದರು. " ಬೆಳಗಿನ ನಾಲ್ಕು ಗಂಟೆಯ ಸಮಯದಲ್ಲಿ ಹಾಡುವ ಶಬ್ದದಿಂದ ನನಗೆ ಎಚ್ಚರವಾಯಿತು ; ಕಣ್ಣು ತೆರೆದು ನೋಡಲು ರಾನಡೆ ಚಪ್ಪಾಳೆ ಹಾಕುತ್ತ ತುಕಾರಾಮನ ಎರಡು ಅಭಂಗಗಳನ್ನು ತಿರುತಿರುಗಿ ಹಾಡುತ್ತಿದ್ದರು. ಅವರ ಧ್ವನಿಯೇನೂ ಇಂಪಾಗಿರಲಿಲ್ಲ. ಆದರೆ ಅವರ ಭಕ್ತಿಭಾವದಿಂದ ಉತ್ಸಾಹಿತನಾಗಿ ನಾನೂ ಎದ್ದು ಕೂತು ಕೇಳಲಾರಂಭಿಸಿದೆ" ಎಂದು ಗೋಖಲೆ ತಿಳಿಸುತ್ತಾರೆ.

ರಾನಡೆ ಕೋಮಲ ಹೃದಯರು. ಕಷ್ಟದಲ್ಲಿರುವವರನ್ನು ಕಂಡರೆ ಬಲು ಅನುಕಂಪ. ಮನೆಯವರು ಅಥವಾ ಮನೆಯ ಆಳುಗಳು ಯಾರಾದರೂ ಕಾಹಿಲೆ ಮಲಗಿದರೆ ರಾನಡೆ ಅವರ ಕೊಠಡಿಗೆ ಹೋಗಿ ವಿಚಾರಿಸಿ, ಡಾಕ್ಟರಿಂದ ಔಷಧಿ ತರಿಸಿಕೊಡುವಂತೆಯೂ ಸ್ವತಃ ನೋಡಿಕೊಳ್ಳುವಂತೆಯೂ ರಮಾಬಾಯಿಗೆ ತಿಳಿಸುತ್ತಿದ್ದರು. ಗುಣವಾಗುವವರೆಗೂ ಅವರ ಯೋಗಕ್ಷೇಮವನ್ನು ಊಟದ ಸಮಯದಲ್ಲಿ ವಿಚಾರಿಸಿಕೊಳ್ಳುತ್ತಿದ್ದರು.

೧೮೯೬ ರಲ್ಲಿ ಬೊಂಬಾಯಿಯಲ್ಲಿ ಪ್ಲೇಗು ಮೊದಲ ಬಾರಿಗೆ ಕಾಣಿಸಿಕೊಂಡಾಗ ಎಲ್ಲೆಡೆಯೂ ಭಯವೆದ್ದಿತು. ರಾನಡೆಯವರ ಮನೆಯಲ್ಲೂ ಇಲಿಗಳು ಸತ್ತು ಬೀಳುತ್ತಿದ್ದವು. ಆದ್ದರಿಂದ ಮನೆಯವರೆಲ್ಲ ಲೋಣಾವಳಾಕ್ಕೆ ಹೋದರು. ಮನೆಯ ಆಳುಗಳಿಗೆ ಪ್ಲೇಗು ತಗುಲಿ ಮೂವರು ಮೃತಿ ಹೊಂದಿದರು. ಸಂಕಟಕರವಾದ ಸಂಗತಿಗಳು ರಾನಡೆಯವರ ಗಮನಕ್ಕೆ ಬರದಂತೆ—ಅಥವಾ ಊಟದ ನಂತರ ಅವರಿಗೆ ತಿಳಿಯುವಂತೆ—ರಮಾಬಾಯಿ ನೋಡಿಕೊಳ್ಳುತ್ತಿದ್ದರು. ಬೊಂಬಾಯಿಂದ ಲೋಣಾವಳಾಕ್ಕೆ ಹೊರಡುವ ಮುಂಚೆ ಅಡಿಗೆಯವನ ಮಗ ಕಾಹಿಲೆ ಬಿದ್ದನು. ಪ್ಲೇಗಿರಬಹುದೆಂದು ಅನುಮಾನ. ರಾನಡೆಗೆ ಈ ವಿಷಯ ತಿಳಿದುಬಂದಿದ್ದರೆ ಅವರು ಲೋಣಾವಳಾಕ್ಕೆ ಹೋಗುತ್ತಿರಲಿಲ್ಲ; ಅಷ್ಟೇ ಅಲ್ಲ, ಅವನನ್ನು ಆಸ್ಪತ್ರೆಗೆ ಸಾಗಿಸುವ ಮೊದಲು ಅವನ ತಾಯಿ ಕಣ್ಣೀರು ಹಾಕಿದ್ದರೆ, ರಾನಡೆ ರೋಗ ಸಾಂಕ್ರಾಮಿಕವಾದದ್ದೆಂಬುದನ್ನೂ ಗಮನಿಸದೆ, 'ಪಾಪ, ಬಡಮಗುವನ್ನು ಆಸ್ಪತ್ರೆಗೆ ಕಳಿಸಬೇಡಿ, ಮನೆಯಲ್ಲೇ ಇರಲಿ' ಎಂದು ಬಿಡುತ್ತಿದ್ದರು; – ಹೀಗೆಂದು ರಮಾಬಾಯಿ ತಮ್ಮ "ನೆನಪುಗಳ"ಲ್ಲಿ ತಿಳಿಸುತ್ತಾರೆ.

"ರಾನಡೆಯವರ ಸಮೀಪವರ್ತಿಗಳಾದ ಯುವಕರು ಅವರ ಸಾನ್ನಿಧ್ಯವನ್ನು ಪವಿತ್ರ ಸಾನ್ನಿಧ್ಯವೆಂದು ಭಾವಿಸುತ್ತಿದ್ದರು. ಅವರ ಎದುರಿನಲ್ಲಿ ಕ್ಷುದ್ರವಾದದ್ದೇನನ್ನೂ ಆಡುತ್ತಿರಲಿಲ್ಲ; ಅವರ ಸಹವಾಸದಲ್ಲಿರುವಾಗ ಅಯೋಗ್ಯವಾದ ಆಲೋಚನೆಗಳನ್ನು ಕೂಡ ಮಾಡಲು ಭಯಪಡುತ್ತಿದ್ದರು. ಈ ಮಾತು ಅತಿಶಯೋಕ್ತಿಯೇನಲ್ಲ" ಎಂದು ಗೋಖಲೆ ತಿಳಿಸುತ್ತಾರೆ.

ಜೀವಿತ ಕ್ರಮದಿಂದ ಮತಧರ್ಮವನ್ನು ತೆಗೆದುಹಾಕುವ ವಿಷಯ ರಾನಡೆಯವರಲ್ಲಿ ಕ್ರೋಧವನ್ನು ಎಬ್ಬಿಸುತ್ತಿತ್ತು. ಡೆಕ್ಕನ್ ಕಾಲೇಜಿನ ಪ್ರೊಫೆಸರ್ ಸೆಲ್ಬಿ ಎಂಬವರ ಲೇಖನವನ್ನು ಖಂಡಿಸಿ ಬರೆದ (೧೮೮೨) ಲೇಖದಲ್ಲಿ ಅವರ ಉಗ್ರಧರ್ಮಾಸಕ್ತಿ ಚೆನ್ನಾಗಿ ವ್ಯಕ್ತವಾಗಿದೆ:

"ನಮ್ಮ ಜನದ ಮನಸ್ಸು ನಾಸ್ತಿಕತನದಲ್ಲಿ ವಿರಮಿಸಲಾರದು. ಸರ್ವಕಾಲಕ್ಕೂ ಮಾನ್ಯನಾದ ಮಹಾಧರ್ಮಗುರುವೊಬ್ಬನು ಒಂದು ಕಾಲದಲ್ಲಿ ಆ ಪ್ರಯೋಗವನ್ನು ನಡಸಿದನು. ಆ ಬಗೆಯ ಬೋಧನೆ ನಮ್ಮ ಜನದ ಮನಸ್ಸನ್ನು ಹಿಡಿಯಲಾರದೆನ್ನುವುದಕ್ಕೆ ಬೌದ್ಧ ಮತದ ಅವನತಿಯೇ ಒಂದು ನಿದರ್ಶನವಾಗಿದೆ."

೧೮೮೫ ರಲ್ಲಿ ನಡೆದ ಒಂದು ಪ್ರಸಂಗವೂ ರಾನಡೆಯವರ ಧರ್ಮಾಭಿಮಾನವನ್ನು ಹೊರಪಡಿಸುತ್ತದೆ. ಡೆಕ್ಕನ್ ಕಾಲೇಜಿನ ವಾರ್ಷಿಕ ಕೂಟದ ಸಂದರ್ಭದಲ್ಲಿ ಅಧ್ಯಕ್ಷರಾದ ಡಾ|| ಭಂಡಾರ್ಕರ್ ಅವರು ಧಾರ್ಮಿಕಸಂಸ್ಕೃತಿಯ ಆವಶ್ಯಕತೆಯನ್ನು ಒತ್ತಿ ಹೇಳುತ್ತ ಅದಿಲ್ಲದೆ ಹೃದಯ ಪರಿಶುದ್ಧತೆಯನ್ನು ಸಾಧಿಶುವುದು ಅಸಾಧ್ಯವೆಂದರು. ಆಗರ್ಕರ್ ಆ ಅಭಿಪ್ರಾಯವನ್ನು ವಿರೋಧಿ ಸುತ್ತ ಧಾರ್ಮಿಕ ಚರ್ಚೆಗಳಿಂದ ವೃಥಾ ಶಕ್ತಿ ವ್ರಯವಾಗುತ್ತದೆಂದು ಹೇಳಿ ಸಂಸ್ಕೃತಿಯ ಸಾಧನೆಗೆ ಮತಧರ್ಮ ಅನಾವಶ್ಯಕವೆಂದು ಸಾಧಿಸಿದರು. ಟಿಳಕರು ಆಗರ್ಕರರ ವಾದವನ್ನೇ ಬಲವಾಗಿ ಸಮರ್ಥಿಸಿದರು. ರಾನಡೆ ಮತ ಧರ್ಮ ಇಂಡಿಯದ ವಿಶೇಷಲಕ್ಷಣವೆಂದೂ ಮಿಲ್ ಸ್ಪೆನ್ಸರ್ ಮೊದಲಾದವರ ನಾಸ್ತಿಕವಾದವನ್ನು ಭಾರತ ಎಂದೂ ಅನುಸರಿಸದೆಂದೂ ತಿಳಿಸಿ, ಭಾರತಕ್ಕೆ ಮತಧರ್ಮ ಜೀವಕ್ಕಿಂತ ಪ್ರಿಯವಾದುದೆನ್ನುವುದನ್ನು ಮರೆತು ಹಲವು ಜನ ಮುಂದಾಳುಗಳು ವರ್ತಿಸುತ್ತಿದ್ದಾರೆಂದು ಹೇಳಿದರು. ಲ್ಲಿಸಭೆಯ ಶಾಂತಿಮೂಡುವುದರ ಬದಲು ಬಿಸಿಯೇರಿತು.

ಸಮಾಜಸುಧಾರಕರಾದ ರಾನಡೆ ಹಿಂದೂಧರ್ಮದ ಅನೇಕ ಆಚಾರಗಳನ್ನೂ ನಂಬಿಕೆಗಳನ್ನೂ ಒಪ್ಪುತ್ತಿರಲಿಲ್ಲ. ಯುಗಾಂತರಗಳಿಂದ ಬೆಳೆದುಕೊಂಡುಬಂದ ಅನೇಕ ಅಸಹ್ಯಾಚಾರಗಳನ್ನು ಕಿತ್ತೊಗೆದ ಪ್ರಾರ್ಥನಾ ಸಮಾಜ ನಿಜವಾದ ಹಿಂದೂ ಧರ್ಮವನ್ನು ಪ್ರತಿಬಿಂಬಿಸುತ್ತದೆಯೆಂದು ಹೇಳುತ್ತಿದ್ದರು. ವಿಗ್ರಹಾರಾಧನೆ, ಅಸ್ಪೃಶ್ಯತೆ, ಇತ್ತೀಚಿನ ಜಾತಿಭೇದಗಳು ಇವೇ ಆ ಅಸಹ್ಯಾಚಾರಗಳೆಂದು ಹೇಳುತ್ತಿದ್ದರು.

ರಾನಡೆ ಬೈಬಲನ್ನು ಚೆನ್ನಾಗಿ ಬಲ್ಲವರಾಗಿದ್ದರು. ಆದರೆ ಸಮಯ ಬಂದಾಗ ಕ್ರೈಸ್ತಮತಕ್ಕೆದುರಾಗಿ ಪರಿಷ್ಕೃತ ಹಿಂದೂಧರ್ಮವನ್ನು ಸಮರ್ಥಿಸುತ್ತಿದ್ದರು. ೧೮೯೧ರ ಸೆಪ್ಟಂಬರಿನಲಿ ಡಾ|| ಪೆಂಟ್‌ಕಾಸ್ಟ್ ಎಂಬುವರು ಕ್ರೈಸ್ತಧರ್ಮವನ್ನು ಕುರಿತು ಪುಣೆಯಲ್ಲಿ ಹದಿನೈದು ಉಪನ್ಯಾಸಗಳನ್ನು ಇತ್ತರು. ಪೆಂಟ್‌ಕಾಸ್ಟ್ ಒಳ್ಳೇ ವಾಗ್ಮಿಯಾದ್ದರಿಂದ ಭಾಷಣವನ್ನು ಕೇಳಲು ಬಹುಜನರು ನೆರೆಯುತ್ತಿದ್ದರು. ಭಾಷಣದ ಕೊನೆಯ ದಿವಸ ವಂದನಾರ್ಪಣೆ ಸಲ್ಲಿಸುವ ಕಾರ್ಯವನ್ನು ರಾನಡೆ ಒಪ್ಪಿಕೊಂಡರು. ಭಾಷಣಕಾರರು ಮುಕ್ಕಾಲು ಗಂಟೆಯಕಾಲ ಮಾತಾಡಿದ್ದರು. ರಾನಡೆ ಅದಕ್ಕೂ ಹೆಚ್ಚಿನ ಕಾಲವನ್ನು ವಂದನಾರ್ಪಣೆಗೆ ತೆಗೆದುಕೊಂಡರು. ಹಿಂದು

ಧರ್ಮದ ಪರವಾಗಿ ಕೆಲವು ಮಾತುಗಳನ್ನು ಆಡುವುದು ಆವಶ್ಯಕವೆನಿಸಿತು ರಾನಡೆಗೆ. ಆದ್ದರಿಂದ ಗ್ರೀಕ್, ರೋಮನ್, ಯಹೂದಿ, ಕ್ರೈಸ್ತ ಮತ್ತು ಮುಸಲ್ಮಾನ್ ಧರ್ಮಗಳನ್ನೂ ಹಿಂದೂಧರ್ಮದ ನಾನಾ ಶಾಖೆಗಳನ್ನೂ ವೈಷ್ಣವ ಪಂಥಗಳವರೆಗೂ ವಿವೇಚಿಸಿದರು. ಅವರ ಭಾಷಣ ಬಹು ಪರಿಣಾಮಕಾರಿಯಾಯಿತು. ಸಭಾಜನರು "ಈ ವಿದ್ಯಾರತ್ನ ಬ್ರಾಹ್ಮಣ ವರ್ಗಕ್ಕೂ ಪುಣೆಗೂ ಮಾತ್ರ ಸೇರಿದ್ದಲ್ಲ, ಇಡೀ ಇಂಡಿಯಕ್ಕೆ ಸೇರಿದ್ದು. ರಾನಡೆಯವರನ್ನಲ್ಲದೆ ಇನ್ನಾರನ್ನು ನಿಜವಾದ ದೇಶನಾಯಕರೆಂದು ಕರೆಯಬಹುದು ?" ಎಂದು ಮುಂತಾಗಿ ಮಾತಾಡಿಕೊಂಡು ಹೋದರು.

## ೧೧. ಬೊಂಬಾಯಿ ೧೮೯೩—೧೯೦೦

೧೮೯೩ ರ ನವೆಂಬರ್ ೨೩ ರಲ್ಲಿ ರಾನಡೆ ಹೈಕೋರ್ಟಿನ ಜಡ್ಜಿ ಪೀಠ ವನ್ನು ಅಲಂಕರಿಸಿದರು. ರಾನಡೆಯವರಿಗೆ ಈ ಪದವಿ ದೊರೆತದ್ದರಿಂದ ಜನರಿಗೆ ಬಹು ಸಂತೋಷವಾಯಿತು. ರಾನಡೆಯವರ ಗೌರವಾರ್ಥವಾಗಿ ಅನೇಕ ಔತಣ ಕೂಟಗಳೂ ಬಿನ್ನವತ್ತಳೆ ಸಮರ್ಪಣೆಯ ಉತ್ಸವಗಳೂ ನಡೆದವು.

ರಾನಡೆಯವರ ಪ್ರಸಿದ್ಧಿಗೆ ಅವರ ರಾಜಕೀಯ ಸಾಮಾಜಿಕ ಚಟು ವಟಿಕೆಗಳೇ ಮುಖ್ಯ ಕಾರಣವಾಗಿರುವುದರಿಂದ ಅವರ ನ್ಯಾಯ ವೃತ್ತಿ ಯನ್ನು ಕುರಿತು ಇಲ್ಲಿ ಹೆಚ್ಚಾಗಿ ಹೇಳಬೇಕಾದ್ದಿಲ್ಲ. ಏಳು ವರ್ಷಗಳ ಕಾಲ ಹೈಕೋರ್ಟಿನ ಪದವಿಯಲ್ಲಿದ್ದರು ; ತಮ್ಮ ಕೆಲಸವನ್ನು ದಕ್ಷತೆಯಿಂದ ನಿರ್ವ ಹಿಸಿದರು. ಒಂದು ವಿಷಯನ್ನು ಮಾತ್ರ ಈ ಸಂದರ್ಭದಲ್ಲಿ ಪ್ರಸ್ತಾಪಿಸ ಬಹುದು : ಹಿಂದು ಕುಟುಂಬಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ತೀರ್ಪನ್ನು ಕೊಡುವಾಗ ನ್ಯಾಯಾಧೀಶರ ವಿವೇಚನೆಗೆ ಹೆಚ್ಚು ಅವಕಾಶ ದೊರೆಯು ತ್ತಿತ್ತು. ಹಿಂದು ಲಾ ಪೀನಲ್ ಕೋಡ್ ಮೊದಲಾದ ಕಾನೂನುಗಳಂತೆ ವ್ಯವಸ್ಥಿತವಾಗಿಲ್ಲ. ಹಿಂದು ಕುಟುಂಬಕ್ಕೆ ಸಂಬಂಧಪಟ್ಟ ತೀರ್ಪುಗಳಲ್ಲಿ ಹಿಂದು ಧರ್ಮಶಾಸ್ತ್ರಗಳನ್ನೂ ಆ ಶಾಸ್ತ್ರಗಳಿಂದ ನ್ಯಾಯ ದೊರೆಯದೆಂದು ತೋರಿದಾಗ ಬ್ರಿಟಿಷ್ ನ್ಯಾಯ ನೀತಿಗಳನ್ನೂ ಅನುಸರಿಸುವುದು ಪದ್ಧತಿ ಯಾಗಿದೆ. ಹಿಂದೂ ಕಟ್ಟಳೆಗಳನ್ನು ಧಾರಾಳಗೊಳಿಸುವುದರಲ್ಲಿ—ಉದಾ ಹರಣೆಗೆ, ಸ್ತ್ರೀಯರ ಹಕ್ಕುಗಳನ್ನು ಊರ್ಜಿತಗೊಳಿಸುವುದರಲ್ಲಿ,— ಬೊಂಬಾಯಿ ಹೈಕೋರ್ಟು ಮುಂದಾಳುತನವನ್ನು ವಹಿಸಿದೆಯೆಂದು ಹೇಳು ತ್ತಾರೆ. ಈ ವಿಸ್ತರಣ ಕಾರ್ಯದಲ್ಲಿ ರಾನಡೆಯವರ ಪಾತ್ರ ಮುಖ್ಯವಾದದ್ದಾ ಗಿದೆ. ಅವರ ತೀರ್ಪುಗಳು ಶ್ರುತಿ ಸ್ಮೃತಿ ಪುರಾಣೇತಿಹಾಸಗಳ ಆಧಾರ ಗಳನ್ನೂ ಬಹು ಮುಖ್ಯವಾದ ಇಂಗ್ಲಿಷ್ ತೀರ್ಪುಗಳ ಆಧಾರಗಳನ್ನೂ ಒಳ ಗೊಂಡ ವಿದ್ವತ್ಪೂರ್ಣ ಪ್ರಬಂಧಗಳಂತಿವೆ ಎಂದು ಘಾಟಕರು ತಿಳಿಸುತ್ತಾರೆ.

ರಾನಡೆಯವರ ದಿನವಹಿ ಕಾರ್ಯಕ್ರಮವನ್ನು ರಮಾಬಾಯಿ ತಿಳಿಸಿ ದ್ದಾರೆ : ಬೆಳಗಿನ ಜಾವ ಮೂರು ಗಂಟೆಯನಂತರ ಎದ್ದು ನಾಲ್ಕು

ಗಂಟೆಯ ವರೆಗೆ ದೇವರ ಧ್ಯಾನ ಮಾಡುತ್ತ ಮಲಗಿದ್ದು ಆಮೇಲೆ ಹಾಸಿಗೆ ಯಲ್ಲಿ ಎದ್ದು ಕುಳಿತು ೪ ರಿಂದ ೫ ಗಂಟೆಯ ವರೆಗೆ ತುಕಾರಾಂ ನಾಮ್‌ದೇವ್‌ರ ಅಭಂಗಗಳನ್ನು ಹಾಡುವರು. ಅನಂತರ ಕೆಲವು ಸಂಸ್ಕೃತ ಸ್ತೋತ್ರ ಗಳನ್ನು ಹಾಡಿ ಐದುವರೆ ಗಂಟೆಯ ವೇಳೆಗೆ ಹಾಸಿಗೆಯಿಂದ ಏಳುವರು. ಪ್ರಾತಃಕರ್ಮಗಳನ್ನು ಮುಗಿಸಿ ಆರು ಗಂಟೆಯ ಸಮಯಕ್ಕೆ ಕೆಲಸಕ್ಕೆ ಸಿದ್ಧ ರಾಗಿ ಮುಂದಿನ ಕೊಠಡಿಯಲ್ಲಿ ಸೋಫಾದಲ್ಲಿ ಕೂರುವರು. ದಿನ ಪತ್ರಿಕೆಯ ತಂತೀ ವರ್ತಮಾನಗಳನ್ನೂ ಅಂಚೆ ಕಾಗದಗಳನ್ನೂ ನೋಡಿ ೯-೩೦ ಗಂಟೆಗೆ ಸ್ನಾನ ಮಾಡಿ ಊಟ ಮಾಡುವರು. ಆಮೇಲೆ ಸುಮಾರು ಒಂದು ಗಂಟೆಯ ಕಾಲ ಮಾತಾಡುತ್ತ ಕುಳಿತಿದ್ದು, ಅನಂತರ ಬಟ್ಟೆ ಹಾಕಿಕೊಂಡು ಸುಮಾರು ೧೦-೩೦ ರ ಸಮಯಕ್ಕೆ ಗಾಡಿಯಲ್ಲಿ ಕೋರ್ಟಿಗೆ ಹೋಗುವರು. ೧೧ ರಿಂದ ೫ ಗಂಟೆಯ ವರೆಗೆ ಕೋರ್ಟು. ವಿರಾಮದ ವೇಳೆಯಲ್ಲಿ ಅಲ್ಲಿಯೇ ಮಧ್ಯಾಹ್ನದ ಉಪಾಹಾರವನ್ನು ಮುಗಿಸುವರು. ಆರು ಗಂಟೆಯ ವರೆಗೆ ಗಾಳಿ ಸಂಚಾರ ಮಾಡಿ ಮನೆಗೆ ಹಿಂದಿರುಗುವರು. ಅರ್ಧ ಗಂಟೆಯ ಕಾಲ ಮಾತಾಡುತ್ತ ಕುಳಿತಿದ್ದು, ಕಾಗದಗಳಿಗೆ ಉತ್ತರ ಬರೆಯುವುದರಲ್ಲೂ ಓದುವುದ ರಲ್ಲೂ ತೊಡಗುವರು. ಪತ್ರ ವ್ಯವಹಾರದಲ್ಲಿ ರಾನಡೆ ಕರಾರುವಾಕ್ಕಾಗಿದ್ದರು; ಪತ್ರ ಬಂದ ದಿನವೇ ಉತ್ತರ ಬರೆಯುವುದು ಅವರ ಪದ್ಧತಿ. ನಾನಾ ರೀತಿಯ ಜನರು ಅವರನ್ನು ಅನೇಕ ವಿಷಯಗಳಲ್ಲಿ ಸಲಹೆ ಕೇಳುತ್ತಿದ್ದರು. ಆದ್ದರಿಂದ ಹೆಚ್ಚಾಗಿಯೇ ಪತ್ರಗಳು ಬರುತ್ತಿದ್ದವು. ಅವುಗಳನ್ನು ಪರಿ ಶೀಲಿಸಿ ಉತ್ತರ ಬರೆಯುವುದು ತಕ್ಕಷ್ಟು ಶ್ರಮದ ಕೆಲಸವಾಗುತ್ತಿತ್ತು. ಸಂಜೆಯ ಊಟವಾದ ಮೇಲೆ ಮಕ್ಕಳ ಪಾಠಗಳನ್ನು ವಿಚಾರಿಸುತ್ತಿದ್ದರು. ಆಮೇಲೆ ಮನೆಯವರೊಡನೆ ಸ್ವಲ್ಪ ಹೊತ್ತು ಮಾತಾಡುತ್ತಿದ್ದು, ಮಲಗಲು ಹೋಗುವರು. ನಿದ್ದೆ ಹೋಗುವವರೆಗೂ ಓದುತ್ತ ಮಲಗುವರು. ರಜಾ ದಿನಗಳಲ್ಲಿ ಅವರನ್ನು ಭೇಟಿ ಮಾಡಲು ಅನೇಕರು ಬರುವರು. ಭೇಟಿ ಕಾರರನ್ನು ಕಂಡು ಮಾತಾಡಿಸಿ ಅವರು ಯಾವ ಕೆಲಸಕ್ಕೆ ಸರಿಯಾದವ ರೆಂದು ಕಂಡುಹಿಡಿದು ನಿಯೋಜಿಸುತ್ತಿದ್ದ ರಾನಡೆಯವರ ಜಾಣ್ಮೆಯನ್ನು ಕಂಡು ರಮಾಬಾಯಿ ಹರ್ಷಿಸುತ್ತಿದ್ದರು.

ಹೈಕೋರ್ಟು ಜಡ್ಜಿಯಾಗಿ ಬೊಂಬಾಯಿಗೆ ಬಂದ ಮೇಲೆ ರಾನಡೆ ಯವರ ಸಮಾಜ ಸುಧಾರಣಾಕಾರ್ಯ ಎಂದಿನಂತೆ ಚುರುಕಾಗಿ ನಡೆಯಿತು.

ಯಾವ ನೀತಿ ನಿಯಮಗಳನ್ನು ಅನುಸರಿಸಿ ಅವರು ಸುಧಾರಣೆಯ ಚಳವಳಿಯನ್ನು ವ್ಯವಸ್ಥೆ ಮಾಡಿದರೆಂಬುದನ್ನು ಈ ಮೊದಲೇ (೭ ನೆಯ ಅಧ್ಯಾಯದಲ್ಲಿ) ನೋಡಿದ್ದೇವೆ. ಇಲ್ಲಿ ಅವರ ವೈಯಕ್ತಿಕ ಜೀವನಕ್ಕೆ ಸಂಬಂಧಿಸಿದಂತೆ ಕೆಲವು ಸುಧಾರಣಾ ಸಂಗತಿಗಳನ್ನು ಮಾತ್ರ ವಿವೇಚಿಸೋಣ.

೧೮೮೪ ರ ಜನವರಿಯಲ್ಲಿ ಬೊಂಬಾಯಿಯ ಬ್ರಾಹ್ಮಣರು ರಾನಡೆಯವರ ಗೌರವಾರ್ಥವಾಗಿ—ಅವರಿಗೆ ಹೈಕೋರ್ಟ್ ಜಡ್ಜಿಯ ಪದವಿ ದೊರೆತದ್ದಕ್ಕಾಗಿ—ಪಾನ್‌ಸುಪಾರೀ ಕೂಟವನ್ನು ಏರ್ಪಡಿಸಿದರು. ಆ ಸಂದರ್ಭದಲ್ಲಿ ನಡೆದ ಭಾಷಣಗಳಿಂದ—ಬ್ರಾಹ್ಮಣರಾಗಿ ಆ ಪದವಿ ದೊರೆತದ್ದು ಸಂತೋಷಕ್ಕೆ ಕಾರಣವೆಂದು ವ್ಯಕ್ತವಾಯಿತು. ರಾನಡೆ ತಮ್ಮ ಉತ್ತರದಲ್ಲಿ ಬ್ರಾಹ್ಮಣಿಕೆ ಕೇವಲ ಜನ್ಮದಿಂದ ಬರತಕ್ಕದ್ದಲ್ಲ, ಗುಣದಿಂದ ಬರತಕ್ಕದ್ದೆಂಬ ವಿಷಯವನ್ನು ವಿಸ್ತರಿಸಿದರು. ಸ್ವಾಯತ್ತತೆ, ತೇಜಸ್ಸು, ತಪಸ್ಸು, ಪರಿಶುದ್ಧತೆ, ಇಂದ್ರಿಯ ನಿಗ್ರಹ—ಇವೇ ಮೊದಲಾದ ಉತ್ತಮ ಗುಣಗಳುಳ್ಳವನೇ ನಿಜವಾದ ಬ್ರಾಹ್ಮಣನೆಂದು ನುಡಿದರು. ಮನುಷ್ಯನ ಜಾತಿಯನ್ನು ನೋಡಬೇಡಿ; ಜಾತಿಗಲ್ಲ ಮರ್ಯಾದೆ ಕೊಡಬೇಕಾದುದು, ಗುಣಕ್ಕೆ. ಯಾರಲ್ಲಿ ಉತ್ತಮ ಗುಣಗಳಿವೆಯೋ ಅವರಿಗೆ ಗೌರವ ಸಲ್ಲತಕ್ಕದ್ದು—ಎಂದು ತಿಳಿಸಿದರು. ಸಭಿಕರಲ್ಲಿ ಅನೇಕರಿಗೆ ಈ ಮಾತುಗಳು ಹಿತವೆನಿಸಲಿಲ್ಲ; "ನೇಟಿವ್ ಒಪಿನಿಯನ್" ಎಂಬ ಪತ್ರಿಕೆಯಲ್ಲಿ ಈ ಅಭಿಪ್ರಾಯಗಳ ಖಂಡನೆ ಕಾಣಿಸಿಕೊಂಡಿತು.

೧೮೯೪ ರ ಕೊನೆಯಲ್ಲಿ ರಾನಡೆ ಮತ್ತು ಇತರರು ಮದ್ರಾಸ್ ಕಾಂಗ್ರೆಸ್ ಮತ್ತು ಕಾನ್ಫರೆನ್ಸುಗಳಿಂದ ಹಿಂದಿರುಗುತ್ತಿದ್ದರು. ರಾನಡೆ ಮತ್ತು ಭಂಡಾರ್ಕರ್ ಒಂದನೆಯ ತರಗತಿಯ ಗಾಡಿಯಲ್ಲಿದ್ದರು, ಮಿಕ್ಕವರು ಎರಡನೆಯ ತರಗತಿಯಲ್ಲಿದ್ದರು. ರೈಲು ಷೋಲಾಪುರಕ್ಕೆ ಬಂದಾಗ ರಾನಡೆ ಇಳಿದು ಸ್ನೇಹಿತರೊಡನೆ ಮಾತಾಡಲು ಬೇರೆ ಗಾಡಿಗೆ ಹೋದರು. ಆಗ ಒಬ್ಬ ಯುರೋಪಿಯನ್ ಯುವಕ ಜಡ್ಜಿಯು, ಗಾಡಿಯೊಳಕ್ಕೆ ಬಂದು ರಾನಡೆಯ ಹಾಸಿಗೆಯನ್ನು ಕೆಳಕ್ಕೆ ಎಳೆದು ಹಾಕಿ ಅವರ ಸ್ಥಳದಲ್ಲಿ ಕುಳಿತನು. ರಾನಡೆ ತಮ್ಮ ಗಾಡಿಗೆ ಹಿಂದಿರುಗಿದವರು ಯಾವ ವಿರೋಧವನ್ನೂ ತೋರಿಸದೆ ಡಾ. ಭಂಡಾರ್ಕರರ ಜೊತೆಯಲ್ಲಿ ಕುಳಿತರು. ನಿದ್ದೆಯ ಸಮಯ ಬಂದಾಗ ಭಂಡಾರ್ಕರ್ ಮೇಲಿನ ಸೀಟಿನಲ್ಲಿ ಮಲಗಿ, ತಮ್ಮ ಸ್ಥಳವನ್ನು

ರಾನಡೆಗೆ ಬಿಟ್ಟುಕೊಟ್ಟರು. ಪುಣೆಗೆ ಬರುವ ವೇಳೆಗೆ ರಾನಡೆ ಹೈಕೋರ್ಟ್ ಜಡ್ಜಿಯೆಂಬುದು ಇಂಗ್ಲಿಷರವನಿಗೆ ಹೇಗೊ ತಿಳಿದುಬಂದಿತ್ತು. ಆತ ರಾನಡೆಯ ಕ್ಷಮಾಪಣೆಯನ್ನು ಕೇಳಬೇಕೆಂದು ಇದ್ದನಂತೆ. ಆತ ತಮ್ಮ ಬಳಿಗೆ ಬರುವುದನ್ನು ಕಂಡು ರಾನಡೆ ಬೆನ್ನು ತಿರುಗಿಸಿ ಹೊರಟುಹೋದರು.*

ಈ ಘಟನೆ ಜರುಗಿದ ಮರುದಿವಸ, ಏನಾದರೂ ಕ್ರಮ ಕೈಕೊಳ್ಳುವುದುಂಟೆ—ಎಂದು ಗೋಖಲೆ ವಿಚಾರಿಸಿದರು. ಅದಕ್ಕೆ ರಾನಡೆ ಈ ರೀತಿ ಉತ್ತರವಿತ್ತರು :

ನನಗೆ ಅದರಲ್ಲೆಲ್ಲ ನಂಬಿಕೆಯಿಲ್ಲ. ಅದರಿಂದ ಮಾತಿಗೆ ಮಾತು ಅಷ್ಟೆ. ಆ ವಿಚಾರದಲ್ಲಿ ಹೊಡೆದಾಡುವುದು ಸರಿಯಲ್ಲ. ಅಲ್ಲದೆ ಈ ವಿಚಾರಗಳಲ್ಲಿ ನಮ್ಮ ಮನಸ್ಸು ಶುದ್ಧವಾಗಿದೆಯೆ ? ನಾವು ನಮ್ಮ ದೇಶದವರೇ ಆದ ಅಸ್ಪೃಶ್ಯರನ್ನು—ಈ ಕಾಲದಲ್ಲಿ ಕೂಡ—ಹೇಗೆ ಕಾಣುತ್ತಿದ್ದೇವೆ ? ನಾವೂ ಅವರೂ ಸಹ ಸ್ವದೇಶಕ್ಕಾಗಿ ಕೈಜೋಡಿಸಿ ಕೆಲಸ ಮಾಡ ಬೇಕಾಗಿರುವ ಈ ಸಮಯದಲ್ಲೂ ನಾವು ನಮ್ಮ ಹಳೆಯ ಉನ್ನತ ಪದವಿಯ ಹಕ್ಕುದಾರಿಗಳನ್ನು ಬಿಟ್ಟುಕೊಡಲು ಸಿದ್ಧವಿಲ್ಲದೆ, ಅವರನ್ನು ಅದುಮಿ ಇಟ್ಟಿದೇವೆ. ಹೀಗಿರುವಾಗ, ನಾವು ಯಾವ ಮನಸ್ಸಿನಿಂದ ತಾನೆ, ನಮ್ಮನ್ನು ತಿರಸ್ಕಾರದಿಂದ ಕಾಣುವ ಆಳರಸ ಜನರನ್ನು ದೂರಬಹುದು ? ಈ ಬಗೆಯ ಸಂಗತಿಗಳು ಅಪಮಾನಕರವಾಗಿವೆ, ಬಹು ನೋವನ್ನುಂಟು ಮಾಡುತ್ತವೆ ಮತ್ತು ನಂಬಿಕೆಯನ್ನು ಘಾಸಿಪಡಿಸುತ್ತವೆ. ಈ ಬಗೆಯ ಅಸಂತೋಷಕರವಾದ ಸಂಗತಿಗಳಿಂದ ನಾವು ನಮ್ಮ ಮುಂದಿರುವ ಕೆಲಸಗಳಲ್ಲಿ ಹೆಚ್ಚು ಶ್ರದ್ಧಾವಂತರಾಗಬೇಕು.†

ರಾನಡೆಯವರ ನಡತೆಯಿಂದ ಇಂಗ್ಲಿಷರವನ ಮನಸ್ಸಿನ ಮೇಲೆ ಆಳವಾದ ಪರಿಣಾಮವಾಯಿತು. ಸುಮಾರು ಐದು ವರ್ಷಗಳ ಅನಂತರ ಆತ ರಾನಡೆಯವರಿಗೆ ಯೂರೋಪಿನಿಂದ ಒಂದು ಕಾಗದವನ್ನು ಬರೆದನು. ಅದರಲ್ಲಿ ರಾನಡೆಯವರ ಸಹನೆಯನ್ನು ಹೊಗಳಿ ಅವರಲ್ಲಿ ಹೃತ್ಪೂರ್ವಕವಾದ ಗೌರವವನ್ನು ಸೂಚಿಸಿ "ನೀವು ನನಗೆ ಸಭ್ಯತನದ ಪಾಠವನ್ನು ಕಲಿಸಿದಿರಿ" ಎಂದು ತಿಳಿಸಿದನು.

ಗೋಖಲೆ ಗಾಂಧಿಯವರ ರಾಜಕೀಯ ಗುರು ; ರಾನಡೆ ಗೋಖಲೆಯವರ ಗುರು. ಇದೊಂದು ದೊಡ್ಡ ಪರಂಪರೆ. ಶಿಷ್ಯರಿಬ್ಬರೂ ರಾನಡೆಯವರ ಅಂತಃಶೋಧನೆಯ ಮತ್ತು ಬಹಿಶ್ಶೋಧನೆಯ ಮಾರ್ಗವನ್ನು

* ಗೋಪಾಲ ಕೃಷ್ಣ ಗೋಖಲೆಯವರ ಭಾಷಣಗಳು, ಪು. ೭೭೬.

† ಗೋಪಾಲ ಕೃಷ್ಣ ಗೋಖಲೆಯವರ ಭಾಷಣಗಳು, ಪು ೭೭೬.

ಕಲಿತರು. ಗಾಂಧಿ ಒಂದು ಬಾರಿ ರಾನಡೆಯವರನ್ನು ಭೇಟಿ ಮಾಡಿ ದಕ್ಷಿಣ ಆಫ್ರಿಕದಲ್ಲಿನ ಭಾರತೀಯರ ಸಮಸ್ಯೆಯ ವಿಷಯದಲ್ಲಿ ಅವರ ಸಲಹೆಯನ್ನು ಕೇಳಿದರು. ಭಾರತೀಯರ ವಿಚಾರದಲ್ಲಿ ದಕ್ಷಿಣ ಆಫ್ರಿಕದ ಬಿಳಿಯರು ವರ್ತಿಸುತ್ತಿದ್ದ ರೀತಿಯನ್ನು ಖಂಡಿಸಿದರು. ಆದರೆ ನಾವು ನಮ್ಮ ಸೋದರರಾದ ಅಸ್ಪೃಶ್ಯರನ್ನು ಹೇಗೆ ಕಾಣುತ್ತಿದ್ದೇವೆ ಎಂಬುದನ್ನು ಮರೆಯಬಾರದು—ಎಂದು ತಿಳಿಸಿದರು.

ಕಾಂಗ್ರೆಸ್ ಮಂಡಪದಲ್ಲಿ ಸಾಮಾಜಿಕ ಸಮ್ಮೇಳನವನ್ನು ನಡಸಲು ಅವಕಾಶ ಕೊಡಕೂಡದೆಂದು ೧೮೯೫ ರ ಕಾಂಗ್ರೆಸ್ ಅಧಿವೇಶನದಲ್ಲಿ ಟಿಳಕರ ಪಕ್ಷದವರು ಉಗ್ರವಾಗಿ ವಾದಿಸಿದರು. ಬಹು ಚರ್ಚೆಯ ಬಳಿಕ ಕಾಂಗ್ರೆಸ್ ಸಾಮಾಜಿಕ ಸಮ್ಮೇಳನ ನಡಸಲು ಅನುಮತಿ ಕೊಟ್ಟಿತು. ಅಷ್ಟೆಲ್ಲ ರಂಪ ನಡೆದ ಮೇಲೆ ಸಮ್ಮೇಳನವನ್ನು ಕಾಂಗ್ರೆಸ್ ಮಂಡಪದಲ್ಲಿ ನಡಸಲು ರಾನಡೆ ಇಷ್ಟಪಡಲಿಲ್ಲ. ಬೇರೆ ಚಪ್ಪರವನ್ನು ರಚಿಸಲಾಯಿತು. ಸಭೆಯ ಸಮಯದಲ್ಲಿ ಗಲಭೆ ಎಬ್ಬಿಸಬೇಕೆಂಬ ಉದ್ದೇಶದಿಂದ, ಕೆಲವರು ಅಲ್ಲಿಗೆ ಬಂದಿದ್ದರು. ರಾನಡೆಯವರ ಶಾಂತಿಯುತವಾದ ಸಮಾಧಾನಕರವಾದ ಭಾಷಣದಿಂದ ಅವರ ಮನಸ್ಸು ಬದಲಾವಣೆ ಹೊಂದಿತೆಂದು ತೋರುತ್ತದೆ. ತಮ್ಮ ಎರಡನೆಯ ಭಾಷಣದ ಕೊನೆಯಲ್ಲಿ ರಾನಡೆ ವ್ಯಕ್ತಪಡಿಸಿದ ಭಾವ ಇಂತಿದೆ—

"ನಾವು ಯಾವುದನ್ನು ಸಹಿಸಿಕೊಳ್ಳಬೇಕು ಯಾವುದನ್ನು ತ್ಯಜಿಸಬೇಕು ಎಂಬುದನ್ನು ತಿಳಿದುಕೊಳ್ಳಬೇಕಾಗಿದೆ ;—ನಿಂದೆಯನ್ನು, ಅಪಹಾಸ್ಯವನ್ನು, ಕೆಲವು ಸಂದರ್ಭಗಳಲ್ಲಿ ವೈಯಕ್ತಿಕವಾದ ಹಾನಿಗಳನ್ನು ಸಹ ತಡೆದುಕೊಂಡು, ಬೈಗುಳಕ್ಕೆ ಬದಲಾಗಿ ಬೈಗುಳವನ್ನು ಎಸೆಯುವುದನ್ನು ಬಿಡಬೇಕಾಗುತ್ತದೆ ; ನಜರೆತ್ತಿನ ಪ್ರವಾದಿಯ ಮಾತುಗಳಲ್ಲಿ ಹೇಳುವುದಾದರೆ, ಕಷ್ಟವನ್ನು ಅಪ್ಪಿಕೊಳ್ಳಬೇಕಾಗುತ್ತದೆ. ಅದೇನು ಸಂತೋಷವೆಂದು ಹಾಗೆ ಮಾಡುವುದಲ್ಲ, ಯಾವ ನೀತಿ ನಿಯಮಕ್ಕಾಗಿ ಅವುಗಳನ್ನು ಸಹಿಸುತ್ತೇವೆಯೊ ಅವರ ಮುಂದೆ ನೋವು ಸಂಕಟಗಳು ಅಲ್ಪ....

"ನಾವು ಶ್ರದ್ಧೆವಹಿಸಿ ಕೆಲಸ ಮಾಡಿದರೆ, ನಮ್ಮ ಮನಃಶಾಂತಿಯನ್ನು ಒಮ್ಮೊಮ್ಮೆ ಕೆಡಿಸುತ್ತಿರುವ ಸುಧಾರಣೆಯ ವಿರೋಧ ಕ್ರಮೇಣ ಹೆಚ್ಚಿನ ಪ್ರಯತ್ನಗಳಿಗೆ ಉತ್ತೇಜಕವಾಗಿ ಪರಿಣಮಿಸಬಹುದು."

ಬೊಂಬಾಯಿಯಲ್ಲಿ ರಾನಡೆ ತಮ್ಮ ಚಟುವಟಿಕೆಗಳನ್ನು ಮುಂದುವರಿಸುತ್ತಲೇ ಇದ್ದರು. ತೇಲಂಗರ ಮರಣಾನಂತರ ಅವನತ ಸ್ಥಿತಿಯಲ್ಲಿದ್ದ ಬೊಂಬಾಯಿ ಯೂನಿಯನ್ ಕ್ಲಬ್ಬನ್ನು ಪುನರುಜ್ಜೀವನಗೊಳಿಸಿ ಶಿಶಿರ

ಕಾಲದ ಉಪನ್ಯಾಸಗಳನ್ನು ವ್ಯವಸ್ಥೆ ಮಾಡಿದರು. ಬೊಂಬಾಯಿಗೆ ಬಂದ ಕೆಲವು ದಿನಗಳಲ್ಲಿಯೇ "ಅವಕೇಂದ್ರೀಕರಣ"ವನ್ನು ಕುರಿತು ಒಂದು ಲೇಖನ ಮಾಲೆಯನ್ನು ರಚಿಸಿದರು. ಮರಾಠೀ ಸಾಹಿತ್ಯದ ಅಭಿವೃದ್ಧಿಯಲ್ಲಿ ತಮಗಿರುವ ಆಸಕ್ತಿಯನ್ನು ಸ್ಪಷ್ಟಪಡಿಸಿದರು. ಪುಣೆಯಲ್ಲಿ ದಖನ್ ಸಭಾ ವನ್ನು ಸ್ಥಾಪಿಸಲು ೧೮೯೬ ರಲ್ಲಿ ಅನುಮತಿ ಇತ್ತರು. ಈ ಸಭಾ ಟಿಳಕರ ಪಕ್ಷಕ್ಕೆ ವಿರುದ್ಧವಾಗಿತ್ತು. ಸಾರ್ವಜನಿಕ ಸಭಾ ಈಗ ಟಿಳಕರ ಪಕ್ಷದವರ ವಶವಾಗಿತ್ತು. ಟಿಳಕರ ಪಕ್ಷ ಬಲಗೊಂಡಂತೆಲ್ಲ ರಾಜಕೀಯ ಕ್ಷೇತ್ರದಲ್ಲಿ ಭಿನ್ನತೆ ತಲೆದೋರಲಾರಂಭಿಸಿತ್ತು. ದಖನ್ ಸಭಾ ಸ್ಥಾಪನೆಯಾದ ಮೇಲೆ ಆ ಭಿನ್ನತೆ ಸ್ಪಷ್ಟ ರೂಪವನ್ನು ತಾಳಿ ಮಂದಗಾಮಿಗಳು ತೀವ್ರಗಾಮಿ ಗಳೆಂಬ ಎರಡು ಪ್ರತ್ಯೇಕ ಪಕ್ಷಗಳಾದವು. ದಖನ್ ಸಭಾದ ಸ್ಥಾಪನೆಗೆ ಅವಕಾಶ ಕೊಟ್ಟದ್ದರಿಂದ ರಾನಡೆಯವರನ್ನು ಬಹು ಮಂದಿ ನಿಂದಿಸಿದರು.

ದಖನ್ ಸಭಾದ ಸ್ಥಾಪನೆಯ ಸಮಯದಲ್ಲಿ ರಾನಡೆ ಪ್ರಕಟಪಡಿಸಿದ ಮಾತುಗಳು ಗಮನಾರ್ಹವಾಗಿವೆ. ಅವು ಅವರ ರಾಜ ನೀತಿಯನ್ನು ವ್ಯಕ್ತ ಪಡಿಸುತ್ತವೆ :

"ಉದಾರ ನೀತಿ ತತ್ತ್ವದ (liberalism) ಅರ್ಥ ವ್ಯಾಪಕವಾದದ್ದು : ಜಾತಿ ಜನಾಂಗಗಳ ಪೂರ್ವ ಗ್ರಹಗಳಿಂದ ಮುಕ್ತರಾಗುವುದು ; ಮನುಷ್ಯ ಮನುಷ್ಯರ ನಡುವೆ ನ್ಯಾಯ ನಿಲ್ಲುವಂತೆ ಶ್ರಮಿಸುವುದು ; ಶಾಸಕರು ಪಾಲಿಸಬೇಕಾದ ಕಾನೂನುಗಳಿಗೆ ಸಲ್ಲತಕ್ಕ ವಿಧೇಯತೆಯನ್ನು ಸಲ್ಲಿಸುವುದು ; ಪ್ರಜೆಗಳಿಗೆ ಶಾಸನದ ಪ್ರಕಾರ ದೊರಕಬೇಕಾದ ಸಮಾನತೆಯನ್ನು ದೊರಕಿಸುವುದು ;—ಇವೆಲ್ಲ ಅದರ ಗುರಿ. ಮಂದಗತಿಯಿಂದ ಸಾಗುವುದೆಂದರೆ—ದೂರದ ಆದರ್ಶಗಳಿಗಾಗಿ, ಅಸಾಧ್ಯವಾದವುಗಳಿಗಾಗಿ ವೃಥಾ ಶ್ರಮಪಡದಿರುವುದು ; ಸ್ವಾಭಾವಿಕವಾದ ಬೆಳವಣಿಗೆಗೆ ಆವಶ್ಯಕವಾದ ಮುಂದಿನ ಹೆಜ್ಜೆಯನ್ನು ಇಡಲು ದಿನವಹಿ ಪ್ರಯತ್ನಿಸುವುದು ; ಆ ಗುರಿಯ ಸಾಧನೆಗಾಗಿ ಎಟುಕುವ ಕೆಲಸಗಳನ್ನು ನ್ಯಾಯಸಮ್ಮತವಾಗಿ, ಹೊಂದಿಕೆಯ ಮನೋಭಾವದಿಂದ ನಿರ್ವಹಿಸುವುದು. ರಾಜಕೀಯ ಚಟುವಟಿಕೆಗಳ ಬೆಲೆಯನ್ನು ಅವುಗಳ ತಾತ್ಕಾಲಿಕ ಫಲದಿಂದ ಅಳೆಯತಕ್ಕದ್ದಲ್ಲ. ಅದರ ನಿಜವಾದ ಬೆಲೆ ಇರುವುದು ಪೌರತನಕ್ಕೆ ಅಗತ್ಯವಾದ ಆತ್ಮಾಭಿಮಾನ ಆತ್ಮ ಪ್ರತ್ಯಯಗಳನ್ನು ಬೆಳಸುವುದರಲ್ಲಿ, ಸಾರ್ವಜನಿಕ ವಿಚಾರಗಳಲ್ಲಿ ಆಸಕ್ತಿಯನ್ನು ಹುಟ್ಟಿಸುವ ರಾಜಕೀಯ ಜಾಗೃತಿಯಲ್ಲಿ."

## ೧೨. ಬೋಧಕ ಮತ್ತು ದೇವತಾ ಶಾಸ್ತ್ರಜ್ಞ

ರಾನಡೆ ಹೈಕೋರ್ಟ್ ಜಡ್ಜಿಯಾಗಿ ಬೊಂಬಾಯಿಯಲ್ಲಿ ವಾಸವಾಗಿದ್ದಾಗ ಪ್ರಾರ್ಥನಾ ಸಮಾಜದೊಂದಿಗೆ ಅವರ ಸಂಬಂಧ ನಿಕಟವಾಗಿತ್ತು. ಸಮಾಜದ ಕಾರ್ಯದರ್ಶಿ ಯಾವ ಹೊತ್ತಿನಲ್ಲಿಯೇ ಬಂದು ಕರೆಯಲಿ, ರಾನಡೆ ತಪ್ಪದೆ ದೇವತಾರಾಧನೆಗೆ ಒಪ್ಪಿಕೊಳ್ಳುತ್ತಿದ್ದರು ಎಂದು ರಮಾಬಾಯಿ ತಿಳಿಸುತ್ತಾರೆ. ಧಾರ್ಮಿಕ ವ್ಯಾಖ್ಯಾನಗಳು ಅವರಿಗೆ ಬಹು ಪ್ರಿಯವಾಗಿದ್ದುವು. ಅವರ ಬೋಧನ ಶಕ್ತಿಯೂ ಸಾರ್ವಜನಿಕ ಪ್ರಾರ್ಥನಾ ಸಾಮರ್ಥ್ಯವೂ ಗಣ್ಯವಾಗಿದ್ದವು. ರಾನಡೆಯವರ ಧರ್ಮೋಪನ್ಯಾಸಗಳು ಬಹು ಸತ್ವಯುತವಾಗಿದ್ದುವೆಂದು ಗೋಖಲೆ ಹೇಳುತ್ತಾರೆ. ರಾನಡೆಯವರ ಭಕ್ತಿಪೂರ್ಣವಾದ ಶಾಂತಿಯುತವಾದ ಧ್ವನಿ ಕೇಳಿದೊಡನೆಯೆ, ತಮ್ಮ ಹೃದಯ ಭಕ್ತಿ ಭಾವದಿಂದ ತುಂಬಿ, ಐಹಿಕ ದುಃಖಗಳೆಲ್ಲ ಅಳಿದು, ತಮ್ಮಲ್ಲಿ ಶ್ರದ್ಧಾಸಕ್ತಿಗಳು ಮೂಡುತ್ತಿದ್ದುವೆಂದೂ, ಒಮ್ಮೊಮ್ಮೆ ದಿವ್ಯಾನಂದದ ಅನುಭವ ಆಗುತ್ತಿತ್ತೆಂದೂ ರಮಾಬಾಯಿ ತಿಳಿಸುತ್ತಾರೆ. ಧರ್ಮೋಪನ್ಯಾಸವನ್ನು ಆರಂಭಿಸುವ ಮೊದಲು ರಾನಡೆ ಒಂದು ಕ್ಷಣಕಾಲ ಧ್ಯಾನಾಸಕ್ತರಾಗಿ ಕಣ್ಣು ಮುಚ್ಚುತ್ತಿದ್ದರು. ಒಮ್ಮೊಮ್ಮೆ ಭಕ್ತಿ ಭಾವದಿಂದ ಅವರ ಕಣ್ಣಲ್ಲಿ ನೀರು ಹೊರಡುತ್ತಿದ್ದುದೂ ಉಂಟು. ಅಂಥ ಸಂದರ್ಭಗಳಲ್ಲಿ ಅವರ ಮುಖವನ್ನು ನಿರೀಕ್ಷಿಸುವ ನಾಸ್ತಿಕನ ಮನದಲ್ಲಿ ಕೂಡ ದೇವತಾ ಭಾವನೆ ಸುಳಿಯುತ್ತಿತ್ತೆಂದು ಹೇಳುತ್ತಾರೆ.

ತಮ್ಮ ಧರ್ಮ ಬೋಧೆಗಳಲ್ಲಿ ಅವರು ಹೆಚ್ಚಾಗಿ ನೀತಿಗಳನ್ನು ತುಂಬಿ ಮಾತುಗಳನ್ನು ನೀರಸವಾಗಿಸುತ್ತಿರಲಿಲ್ಲ. ಅವರ ವ್ಯಾಖ್ಯೆಗಳು ಆತ್ಮೋನ್ನತಿಯನ್ನು ಉಂಟುಮಾಡುತ್ತಿದ್ದುವು; ದಿನ ನಿತ್ಯದ ಕಷ್ಟ ಸುಖಗಳಿಗೆ ಹೊಂದಿಕೊಂಡಂತೆ ಪ್ರಯೋಜನಕಾರಿಯಾಗಿರುತ್ತಿದ್ದವು. ಸಾಮಾನ್ಯವಾಗಿ ಬೈಬಲಿನ ಮಾತುಗಳನ್ನು ಎತ್ತಿಕೊಂಡು ವ್ಯಾಖ್ಯೆಯನ್ನು ಬೆಳಸುತ್ತಿದ್ದರು. ಬೊಂಬಾಯಿಗೆ ಬಂದ ಮೇಲೆ ಆ ಪದ್ಧತಿಯನ್ನು ಬಿಟ್ಟು, ಏಕನಾಥೀ ಭಾಗವತ, ಭಗವದ್ಗೀತೆ, ತುಕಾರಾಮರ ಅಭಂಗ, ಉಪನಿಷತ್ತು ಇವುಗಳಿಂದಲೂ, ಜ್ಞಾನೇಶ್ವರ, ನಾಮದೇವ್, ರಾಮದಾಸ್, ಇವರುಗಳಿಂದಲೂ ವಾಕ್ಯ

ಗಳನ್ನು ಉದ್ಧರಿಸಿ ಭಾಷಣವನ್ನು ಬೆಳಸುತ್ತಿದ್ದರು. ತುಕಾರಾಂ, ಏಕನಾಥ್, ರಾಮದಾಸ್ ಇವರುಗಳನ್ನು ಕುರಿತು ಉಪನ್ಯಾಸ ಮಾಡಲು ಥಾಕೂರ್ ದ್ವಾರ ದೇವಸ್ಥಾನಕ್ಕೆ ಹೋಗುತ್ತಿದ್ದುದನ್ನೂ, ಫಂಡರಾಪುರ, ಆಳಂದಿ ಮೊದಲಾದ ಸ್ಥಳಗಳಿಗೆ ಯಾತ್ರೆ ಹೋಗುತ್ತಿದ್ದುದನ್ನೂ ಜನ ಟೀಕಿಸಿದರು. ತಮ್ಮ ವ್ಯಾಖ್ಯೆಗಳನ್ನು ಕೇಳಲು ಜನ ಎಲ್ಲಿ ಸೇರುತ್ತಾರೊ ಅಲ್ಲಿಗೆ—ಅದು ವಿಗ್ರಹಾರಾಧನೆಯ ದೇವಾಲಯವಾಗಿರಲಿ ಬೇರೆ ಸ್ಥಳವಾಗಿರಲಿ—ಹೋಗಲು ತಮ್ಮ ಅಡ್ಡಿ ಇಲ್ಲವೆಂದು ಹೇಳುತ್ತಿದ್ದರು. ಜನಕ್ಕೆ ತಮ್ಮ ಅಭಿಪ್ರಾಯ ತಿಳಿಯಬೇಕಾದದ್ದು ಮುಖ್ಯ; ಜನ ಸೇರುವೆಡೆಗೆ ಹೋಗಿ ಮಾತಾಡುವುದರಲ್ಲಿ ಆಕ್ಷೇಪಣೆ ಇರಲಾರದೆಂದು ಹೇಳುತ್ತಿದ್ದರು.*

ರಾನಡೆ ದೇವತಾ ಶಾಸ್ತ್ರಜ್ಞರಾಗಿದ್ದರು; ಈಶ್ವರವಾದಿಯಾಗಿದ್ದರು. "ಭಾರತೀಯ ಈಶ್ವರ ವಾದದ ತತ್ತ್ವ" (೧೮೯೬ ರಲ್ಲಿ ಬೊಂಬಾಯಿನ ವಿಲ್ಸನ್ ಕಾಲೇಜಿನಲ್ಲಿ ಮಾಡಿದ ಭಾಷಣ) ಎಂಬ ಭಾಷಣದಲ್ಲಿ ದ್ರವ್ಯವಾಸ್ತವತಾವಾದವನ್ನೂ, ಸ್ವಾರ್ಥಮೂಲತತ್ತ್ವವನ್ನೂ, ವಿಶ್ವ ದೇವೈಕ್ಯವಾದವನ್ನೂ ನಾಸ್ತಿಕ ವಾದವನ್ನೂ ಖಂಡಿಸಿ ದೇವಾಸ್ತಿಕ್ಯ ವಾದವನ್ನು ಪ್ರತಿಪಾದಿಸಿದರು. ಈ ಭಾವವನ್ನು ಅವರು ೧೮೭೨ ರಲ್ಲಿ ಬರೆದ "ಈಶ್ವರ ವಾದಿಯ ನಂಬಿಕೆ" (Theists Confession of Faith) ಎಂಬ ಲೇಖದಲ್ಲಿ ವ್ಯಕ್ತಪಡಿಸಿದ್ದರು. ವಿಶ್ವದ ಮತ್ತು ಮಾನವನ ಮೂಲವೇನು? ದೇವರಿಗೂ ಸೃಷ್ಟಿಗೂ ಏನು ಸಂಬಂಧ? ಮನಸ್ಸಿಗೂ ವಸ್ತುವಿಗೂ ಸಂಬಂಧವಿದೆಯೆ?—ಈ ಸಮಸ್ಯೆಗಳಿಗೆ ಖಚಿತವಾದ ಉತ್ತರ ದೊರೆಯದಿರುವುದರಿಂದ ಅವರ ಮನಸ್ಸು ಕ್ಷೋಭೆಗೊಳ್ಳುತ್ತಿರಲಿಲ್ಲ. ಮನುಷ್ಯನ ಬುದ್ಧಿಯ ಪರಿಮಿತಿಯನ್ನು ಅವರು ಅರಿತಿದ್ದರು. ದುಷ್ಕೃತ್ಯದ ಮೂಲ, ಮನುಷ್ಯನ ಅಸ್ವತಂತ್ರತೆ, ಜೀವದ ಭೂತ ಭವಿಷ್ಯತ್ತುಗಳು—ಇವೇ ಮೊದಲಾದವು ಮನಃಶಾಂತಿಯನ್ನು ಕೆಡಿಸುವ ಅಪರಿಹಾರ್ಯವಾದ ಸಮಸ್ಯೆಗಳೆಂದು ಒಪ್ಪಿಕೊಳ್ಳುವುದು ಅವರಿಗೆ ಸಂಕೋಚವೆನಿಸುತ್ತಿರಲಿಲ್ಲ. ಜೀವನದ ಮೇಲೂ ನಡತೆಯ ಮೇಲೂ ನೇರವಾದ ಪರಿಣಾಮವುಳ್ಳ ವಿಷಯಗಳಲ್ಲಿ ದೃಢವಾದ ಧಾರ್ಮಿಕ ನಂಬಿಕೆಯಿಂದ ನಡೆದರೆ ಸಾಕೆಂದು ತಿಳಿದಿದ್ದರು.

---

* ಗೋಪಾಲಕೃಷ್ಣ ಗೋಖಲೆಯವರ ಭಾಷಣಗಳು, ಪು. ೭೭೪

ಒಂದು ಭಾವನೆ ನಿಜವೆಂಬುದಕ್ಕೆ ಅದರ ಒಳ್ಳೆಯ ಪರಿಣಾಮಗಳೇ ತಕ್ಕ ಸಾಕ್ಷಿಯೆಂದು ತಿಳಿದಿದ್ದರು. " ನಾಗರಿಕ ಮಾನವನ ಈಗಿನ ಸ್ಥಿತಿಗೆ ಪರಿಪೂರ್ಣವಾದ ಪರವಸ್ತುವಿನ ಧಾರ್ಮಿಕ ಆಧಿಪತ್ಯದಲ್ಲಿಯೂ ಆತ್ಮದ ಅಮರತ್ವದಲ್ಲಿಯೂ ಇರುವ ನಂಬಿಕೆಯೇ ಕಾರಣ. ಮಾನವ ಕುಲ ಒಟ್ಟಿನಲ್ಲಿ, ಕೆಲವು ಮಂದಿ ಮೇಧಾವಿಗಳ ವಿಚಾರ ಹೇಗಾದರೂ ಇರಲಿ,—ಈ ಬಗೆಯ ಕಾಪಿಡುವ ನಂಬಿಕೆಯಿಂದ ಮಾತ್ರವೇ ತನ್ನನ್ನು ರಕ್ಷಿಸಿಕೊಳ್ಳ ಬಲ್ಲುದು."—ಎಂಬುದು ಅವರ ನಂಬಿಕೆ.

ಈಶ್ವರನ ಸ್ವರೂಪ, ಮತ್ತು ಈಶ್ವರನಿಗೂ ಮಾನವನಿಗೂ ಇರುವ ಸಂಬಂಧ,—ದೇವತಾ ಶಾಸ್ತ್ರಕ್ಕೆ ಮೂಲಭೂತವಾದ ಈ ಎರಡು ವಿಷಯ ಗಳಲ್ಲಿ—ರಾನಡೆಯವರ ಅಭಿಪ್ರಾಯವೇನೆಂಬುದನ್ನು ಪರಿಶೀಲಿಸೋಣ. " ಈಶ್ವರ ವಾದಿಯ ನಂಬಿಕೆ" ಎಂಬ ಲೇಖದಲ್ಲಿ ಇವುಗಳನ್ನು ಸ್ಪಷ್ಟಪಡಿಸಿ ದ್ದಾರೆ:

ಈಶ್ವರ ಒಂದು ಪರಶಕ್ತಿ. ಮನುಷ್ಯನೂ ಭೌತಪ್ರಪಂಚವೂ ಆತನ ಅಧೀನ. ಈ ಶಕ್ತಿ ಒಂದೇ—ಏಕೈಕ. " ಹಲವು ದೇವರುಗಳಿಲ್ಲ, ದೇವತಾ ಶ್ರೇಣಿಯೂ ಇಲ್ಲ, ಒಳ್ಳೆಯ ದೇವತೆಗಳು ಕೆಡುಕಿನ ದೇವತೆಗಳೆಂಬುದೂ ಇಲ್ಲ;....ಜಡ ಜೀವವೆಂಬುದೂ ಇಲ್ಲ; ಪ್ರಕೃತಿ ಅಥವಾ ಮಾಯೆ, ಪುರುಷ ಎಂಬ ಭೇದಗಳೂ ಇಲ್ಲ. ದೇವನಿರುವನು ಒಬ್ಬನೇ, ಹಲವಲ್ಲ; ಆತನು ಅದ್ವಿತೀಯನು, ತ್ರಿಮೂರ್ತಿಯಲ್ಲ, ದ್ವಿಮೂರ್ತಿಯೂ ಅಲ್ಲ." ಈಶ್ವರನು ಸತ್ತ್ವಶಾಲಿ. ಆತನು ಪುರುಷೋತ್ತಮನು. ಎಲ್ಲ ಕಾರ್ಯಕಾರಣ ಗಳಿಗೂ ಆತನೇ ಮೂಲ. ಆತನು ದೇಶಕಾಲಗಳಿಂದ ಅಬಾಧಿತನು. ಆತನೇ ವಿಶ್ವದಧಿಪತಿಯು, ಆತನ ಲೀಲೆಯಿಂದ ಸೃಷ್ಟಿ ನಡೆಯುತ್ತದೆ. ಭೌತ ಪ್ರಪಂಚವೆಲ್ಲ ಆತನ ಪ್ರಭಾವಕ್ಕೆ ಒಳಗಾಗಿದೆ. ಮಾನವನ ಆತ್ಮದ ಶಕ್ತಿಗೆ, ಅವನ ಉತ್ತಮೋತ್ತಮ ಕಾರ್ಯ ಭಾವನೆಗಳಿಗೆಲ್ಲ ಆತನೇ ಮೂಲ. ಶಕ್ತಿಯಲ್ಲಿ, ಜ್ಞಾನದಲ್ಲಿ, ಒಳ್ಳೆಯತನದಲ್ಲಿ, ಪ್ರೇಮದಲ್ಲಿ, ನ್ಯಾಯದಲ್ಲಿ, ಪವಿತ್ರತೆಯಲ್ಲಿ ಆತನು ಸಕಲರನ್ನೂ ಮೀರಿದವನು.

ಪರಮೇಶ್ವರನ ಗುಣಶಕ್ತಿಗಳು (೧) ಬಾಹ್ಯಪ್ರಪಂಚದಲ್ಲಿಯೂ (೨) ಮಾನವನ ಮನೋಪ್ರಪಂಚದಲ್ಲಿಯೂ (೩) ಮಾನವನ ಚರಿತ್ರೆ ಯಲ್ಲಿಯೂ ಮತ್ತು (೪) ಮಹಾಪುರುಷರೆಂದು ಕರೆಸಿಕೊಳ್ಳುವ ಪ್ರವಾದಿ

ಗಳ, ಕವಿಗಳ, ತತ್ತ್ವಜ್ಞಾನಿಗಳ, ಮತ್ತು ಧರ್ಮವೀರರ ಚಟುವಟಿಕೆ ಗಳಲ್ಲೂ ವ್ಯಕ್ತವಾಗುತ್ತವೆ. ಅವುಗಳನ್ನು ಈಶ್ವರನ ಆತ್ಮದರ್ಶನ ಮಾರ್ಗ ಗಳೆಂದು ಕರೆಯಬಹುದು.

(೧) ಬಾಹ್ಯಪ್ರಪಂಚ. ಪ್ರಕೃತಿಯ ಅಗಾಧ ಶಕ್ತಿಗಳನ್ನು ಗಮನಿಸಿದರೆ ಅದನ್ನು ಸೃಷ್ಟಿಸಿದಾತನು ಎಲ್ಲ ಶಕ್ತಿಗಳಿಗೂ ಮೀರಿದ ಶಕ್ತಿ ಯುಳ್ಳವನು ಎಂದೆನಿಸುತ್ತದೆ. ಪ್ರಕೃತಿ ತನ್ನ ಗುರಿಯನ್ನು ಸಾಧಿಸುವುದ ಕ್ಕಾಗಿ ಸಾಧನಗಳನ್ನು ನಿಯೋಜಿಸುವ ರೀತಿಯನ್ನೂ ನಾನಾ ಬಗೆಯ ಕಾರ್ಯ ಗಳನ್ನು ಎಸಗಲು ವಸ್ತುವನ್ನು ಉಪಯೋಗಿಸುವ ಬಗೆಯನ್ನೂ ನಿರೀಕ್ಷಿಸಿದಲ್ಲಿ ಜಗತ್ಕರ್ತನು ಎಲ್ಲರನ್ನು ಮೀರಿರುವ ಪ್ರಜ್ಞಾಶಾಲಿಯೆಂದು ತೋರದಿರ ಲಾರದು. ಆದರೆ ಪ್ರಕೃತಿಯನ್ನು ವೀಕ್ಷಿಸಿದರೆ, ಅವರ ಕರ್ತನು ಒಟ್ಟಿನಲ್ಲಿ ಗುಣಶಾಲಿಯೆಂದು ತೋರದಿರಬಹುದು.

(೨) ಮಾನವನ ಆಂತರಿಕ ಪ್ರಪಂಚ—ಎಂದರೆ ಮನುಷ್ಯನಲ್ಲಿ ಕಾಣುವ ಅಂತರ್ವಾಣಿ, ಪರಿಪೂರ್ಣತೆಯನ್ನು ಸಾಧಿಸುವ ಆಶೆ, ಒಳ್ಳೆಯ ದನ್ನೂ ಸತ್ಯವನ್ನೂ ಸಾಧಿಸಬೇಕೆಂಬ ಆಶೋತ್ತರ—ಇವೆಲ್ಲ ಪರಸತ್ತ್ವವು ಮನುಷ್ಯನ ಆಶೋತ್ತರಗಳಿಗೆ ಸಾಪವರ್ತವಾಗಿದೆಯೆಂದು ತೋರಿಸುತ್ತವೆ. ಮನುಷ್ಯನಲ್ಲಿ ಸ್ವಾಭಾವಿಕವಾಗಿ ಹುಟ್ಟುವ ಆದರ್ಶಭಾವಗಳಿಗೂ ಆಶೋ ತ್ತರಗಳಿಗೂ, ಮನುಷ್ಯನನ್ನು ನಿರ್ಮಿಸಿದ ಶಕ್ತಿಯೇ ಮೂಲಕಾರಣವಾಗಿರ ಬೇಕು. ಆದ್ದರಿಂದ ಮಾನವನು ಪರಸತ್ತ್ವವನ್ನು ಒಂದು ಶರಣೆಂದೂ, ಕತ್ತಲಲ್ಲಿ ತೊಳಲುವ ಮನುಜನಿಗೆ ಕೈನೀಡುವ ದಿವ್ಯಶಕ್ತಿಯೆಂದೂ ತಿಳಿಯ ಬಹುದಲ್ಲವೆ? ದೇವರ ವಿಷಯದಲ್ಲಿ ರಾನಡೆಯವರ ಭಾವ ಈ ಬಗೆಯ ದೆಂದು ಅವರ ಧರ್ಮೋಪನ್ಯಾಸಗಳಿಂದ ವ್ಯಕ್ತವಾಗುತ್ತದೆ. ಮನುಷ್ಯನ ಸ್ವಭಾವದಲ್ಲಿ ಕ್ರೌರ್ಯವೂ ಪಾಪಬುದ್ಧಿಯೂ ಇರುವುದರಿಂದ ಕರ್ತನಲ್ಲೂ ಆ ಗುಣಗಳನ್ನು ಆರೋಪಿಸಬಹುದಲ್ಲವೆ? ಅದಕ್ಕೆ ರಾನಡೆಯವರ ಉತ್ತರ ಹೀಗಿದೆ—ಕೆಟ್ಟದ್ದೂ ಒಳ್ಳೆಯದೂ ಒಂದೇ ಪ್ರಮಾಣದಲ್ಲಿ ನಿಲ್ಲಲಾರವು. ಮನುಷ್ಯನ ಅಂತರ್ವಾಣಿಯು ಒಂದನ್ನು ದೋಷವೆಂದು ನಿಷೇಧಿಸುತ್ತದೆ, ಇನ್ನೊಂದನ್ನು ಅನುಮೋದಿಸುತ್ತದೆ.

(೩) ಮಾನವ ಚರಿತ್ರೆ—ರಾನಡೆಯವರಿಗೆ ದೈವನಿಯಾಮಕದಲ್ಲಿ ಪೂರ್ಣ ನಂಬಿಕೆಯಿತ್ತು. ಚರಿತ್ರೆಯುದ್ದಕ್ಕೂ ಒಂದು ದೀರ್ಘೋದ್ದೇಶ

ಕಾಣುತ್ತಿದೆಯೆಂದು ಅವರು ತಿಳಿದಿದ್ದರು. ಅನೇಕ ಉಪನ್ಯಾಸಗಳಲ್ಲಿ ಅವರು ಇಂಡಿಯದ ಚಾರಿತ್ರಿಕ ಘಟನೆಗಳಲ್ಲಿ ತೋರಿಬರುವ ನೀತಿ ಸಾಧನೆಗಳನ್ನು ವಿವರಿಸಿದ್ದರು. ಸಾಮಾಜಿಕನ್ಯಾಯದ ಆದರ್ಶಗಳು ಕ್ರಮೇಣ ಉತ್ತಮಗೊಂಡಿರುವುದು, ದುಷ್ಟ ಆಚಾರಗಳನ್ನು ಜನ ಬಿಡುತ್ತ ಬಂದಿರುವುದು, ದೇವರ ವಿಚಾರದಲ್ಲಿ ನೈಜಭಾವನೆಗಳು ಬೆಳೆಯುತ್ತ ಬಂದಿರುವುದು, ಇವುಗಳಲ್ಲೆಲ್ಲ ಅವರು ಚರಿತ್ರೆಯ ನಿರ್ಮಾಣದಲ್ಲಿ ದೇವರ ನಿರ್ದೇಶಕಹಸ್ತ ತೊಡಗಿರುವುದನ್ನು ಕಾಣುತ್ತಿದ್ದರು. ಮಾನವ ಕುಲ ಸತ್ಯ ಬೆಳಕುಗಳ ಕಡೆಗೆ, ಹೆಚ್ಚಿನ ಸ್ವಾತಂತ್ರ್ಯ ಶುದ್ಧತೆಗಳ ಕಡೆಗೆ, ನಡೆಯುತ್ತಿರುವುದನ್ನು ಚರಿತ್ರೆಯಿಂದ ಕಾಣಬಹುದೆಂಬುದು ಅವರ ವಾದ. ಇವೆಲ್ಲ ದೈವ ಪ್ರೇರಣೆಯಿಂದ ನಡೆಯುವುದರಿಂದ ದೈವಗುಣದ ಸ್ವರೂಪ ವ್ಯಕ್ತವಾಗುತ್ತದೆ.

ರಾನಡೆ ಚರಿತ್ರೆಯನ್ನು ಆಳವಾಗಿಯೂ ವಿಪುಲವಾಗಿಯೂ ಓದಿದ್ದರು. ಅದರ ಘೋರ ಭಾಗಗಳನ್ನು ಅವರು ನೋಡಿರಲಿಲ್ಲವೆಂದಲ್ಲ. ಆದರೆ ಶ್ರದ್ಧಾಳುಗಳಾದ ಜನರು ಕತ್ತಲಿಡಿದ ಜಗತ್ತಿಗೆ ಬೆಳಕನ್ನು ತರಲು ಹೋರಾಡುವ ಮನುಷ್ಯನ ಜೊತೆಗೆ ದೇವರೂ ಇರುವನೆಂದು ನಂಬುತ್ತಾರೆ. ಏಸುಕ್ರಿಸ್ತನನ್ನು ಶಿಲುಬೆಗೆ ಏರಿಸಿದ ಘೋರ ಸಂದರ್ಭವೇ ಜಗತ್ತಿಗೆ ಬೆಳಕನ್ನು ತೋರಿದ ಸನ್ನಿವೇಶವಲ್ಲವೆ ?

ಒಂಭತ್ತು ಧರ್ಮೋಪನ್ಯಾಸಗಳಲ್ಲಿ ರಾನಡೆ ಭಕ್ತಿಮಾರ್ಗವನ್ನು ವಿವರಿಸಿದರು. ಅವುಗಳ ಮುಖ್ಯ ಬೋಧೆ ಇದು; ದೇವರು ದಯಾಮಯನು; ಆತನಲ್ಲಿ ಭಕ್ತಿಯಿಂದ ನಡೆದುಕೊಳ್ಳುವುದರಿಂದ ಮನುಷ್ಯನು ಜೀವನದ ದುಃಖಗಳನ್ನು ಜಯಿಸಿ ದೇವ ಸನ್ನಿಧಿಯನ್ನು ಹೊಂದುವನು, ರಾನಡೆಯವರ ಧರ್ಮವ್ಯಾಖ್ಯೆಗಳನ್ನು (Religious Addresses) * ಪರಿಶೀಲಿಸಿದಲ್ಲಿ ದೈವಾನುಭವವು ಮುಖ್ಯವಾಗಿ ಭಕ್ತಿಯಿಂದ ಪ್ರಾಪ್ತವಾಗುತ್ತದೆ ಎಂಬ ಅಭಿಪ್ರಾಯ ಮೂಡುತ್ತದೆ. ದೇವರು ದಯಾಪರನು. ದೀನರಿಗೂ ಅಜ್ಞರಿಗೂ ಪಾಪಿಗಳಿಗೂ ದುರ್ಬಲರಿಗೂ ಸಹಾಯ ಮಾಡಲು ಸದಾ

---

* ಧರ್ಮಪರವ್ಯಾಖ್ಯಾನೆ—ರಾನಡೆಯವರ ಧರ್ಮೋಪನ್ಯಾಸಗಳ ಸಂಗ್ರಹ. ಇದರಲ್ಲಿ ೪೬ ವ್ಯಾಖ್ಯಾನಗಳಿವೆ. ಇವೆಲ್ಲ ಬಹುಮಟ್ಟಿಗೆ ಪ್ರಾರ್ಥನಾ ಸಮಾಜದ ಆರಾಧನಾ ಸಮಯದ ಭಾಷಣಗಳು.

ಸಿದ್ಧನಾಗಿರುತ್ತಾನೆ. ತಮ್ಮ ದೈವಾನುಭವವನ್ನು ಜನರಿಗೆ ತಿಳಿಸುವುದಕ್ಕಾಗಿಯೆ ಆತನು ಸಾಧುಗಳನ್ನೂ ಪ್ರವಾದಿಗಳನ್ನೂ ಲೋಕಕ್ಕೆ ಕಳಿಸುತ್ತಾನೆ. ಮಾನವನ ಹೃದಯದಲ್ಲಿ, ಬಂಧನದಿಂದ ಬಿಡುಗಡೆಯನ್ನು ತರುವ ದೈವಭಕ್ತಿಯನ್ನು ಬಿತ್ತಲು ಸಾಧುಸಂತರು ಸಮರ್ಥರಾಗಿರುತ್ತಾರೆ. ಬಿಡುಗಡೆಯನ್ನು ಹೊಂದಲು ಜ್ಞಾನ ಮಾರ್ಗವೂ ಕರ್ಮಮಾರ್ಗವೂ ಇವೆಯೆಂದು ರಾನಡೆ ಒಪ್ಪುತ್ತಾರೆ. ಆದರೆ ಅವು ಕೆಲವರಿಗೆ ಮಾತ್ರ ಹೇಳಿಸಿದವುಗಳೆಂದು ಅವರ ಅಭಿಪ್ರಾಯ. ಭಕ್ತಿ ಮಾರ್ಗದ ವಿಶೇಷ ಗುಣ ಅದು ಸರಳ, ಸುಲಭ. ಆದ್ದರಿಂದ ಅದು ದುರ್ಬಲರೂ ಅಜ್ಞರೂ ಪಾಪ ಕರ್ಮಿಗಳೂ ಆದ ಮರ್ತ್ಯರಿಗೆ ತಕ್ಕದು. ಆ ಮಾರ್ಗದಲ್ಲಿ ನಡೆಯುವ ಮನುಷ್ಯನು ದೇವರನ್ನು ಶೀಘ್ರವಾಗಿ, ನಿಶ್ಚಯವಾಗಿ ಕಾಣುವನು. ಅಲ್ಲದೆ ಆ ಮಾರ್ಗ ಗಂಡಸರಿಗೂ ಹೆಂಗಸರಿಗೂ ಬ್ರಾಹ್ಮಣರಿಗೂ ಶೂದ್ರರಿಗೂ ಸರ್ವರಿಗೂ ತೆರೆದಿದೆ. ಭಕ್ತಿ ಮಾರ್ಗವನ್ನು ಬೋಧಿಸುವ ಭಾಗವತ ಧರ್ಮ ಹಿಂದೂ ಧರ್ಮದ ಸಾರವೆಂದು ರಾನಡೆ ತಿಳಿದರು. ಆ ಸಾರ ಸಂಗ್ರಹವನ್ನು ಸಾವಿರಾರು ವರ್ಷಗಳ ಕಾಲದಿಂದ ವೈಷ್ಣವ ಧರ್ಮಗಳು ಕಾಪಾಡಿಕೊಂಡು ಬಂದಿವೆ. ಪ್ರಾರ್ಥನಾ ಸಮಾಜ ಭಾಗವತ ಧರ್ಮದ ಪರಂಪರೆಯನ್ನು ನಡಸಿಕೊಂಡು ಬರುತ್ತಿದೆಯೆಂದು ತಿಳಿಸಿದರು.

(೪) ಪ್ರವಾದಿಗಳು, ಜ್ಞಾನಿಗಳು, ಮತ್ತು ವೀರರು. ಸಾಧು ಸಂತರ ಮೂಲಕ ದೇವರು ತನ್ನ ಗುಣವನ್ನು ವ್ಯಕ್ತಪಡಿಸುವ ರೀತಿಯನ್ನು ಮೇಲೆಯೇ ಸ್ವಲ್ಪ ಮಟ್ಟಿಗೆ ತಿಳಿಸಿದೆಯಷ್ಟೆ. ಈ ಮಹಾಪುರುಷರನ್ನು ಕುರಿತು ರಾನಡೆ ಹೀಗೆ ಹೇಳುತ್ತಾರೆ:

ಪ್ರವಾದಿಯ ದರ್ಶನವನ್ನು, ಕವಿಯ ಕಾವನ್ನು, ಧರ್ಮ ಬೋಧಕನ ವಕ್ತೃತ್ವವನ್ನು, ತತ್ತ್ವಜ್ಞಾನಿಯ ಜ್ಞಾನವನ್ನು, ಧರ್ಮವೀರನ ತ್ಯಾಗಬುದ್ಧಿಯನ್ನು ಹೊಂದಿರುವ ಅನುಗ್ರಹಶಾಲಿಗಳಾದ ಜನ ಯಾವಕಾಲದಲ್ಲಿ, ಯಾವದೇಶದಲ್ಲಿಯೇ ಹುಟ್ಟಿರಲಿ, ಆ ದರ್ಶನ, ಆ ಕಾವು, ಆ ವಕ್ತೃತ್ವ, ಆ ಜ್ಞಾನ, ಆ ಶೌರ್ಯ ದಿವ್ಯವಾದ್ದೆಂದು, ಎಂದರೆ ದೇವರ ವಿಶೇಷಾನುಗ್ರಹದಿಂದ ದೊರೆತದ್ದೆಂದು ತಿಳಿಯಬೇಕು. ಈ ದೈವಾನುಗ್ರಹಶಾಲಿಗಳು ಕಾಣುವುದೂ ಅನುಭವಿಸುವುದೂ ಬೋಧಿಸುವುದೂ, ಹೆಚ್ಚೇಕೆ ಅವರ ಇಡೀ ಬದುಕೇ ಒಂದು ಬಗೆಯ ನೈಜವಾದ, ಉದಾತ್ತವಾದ ದರ್ಶನವೆಂದು ತಿಳಿಯಬೇಕು.

ರಾನಡೆಯವರ ಅಭಿಪ್ರಾಯದಲ್ಲಿ, ದೇವರು ಅವತಾರ ಮಾಡುತ್ತಾನೆ ಅಥವಾ ಮಾನವ ರೂಪವನ್ನು ಧರಿಸುತ್ತಾನೆ ಎನ್ನುವುದು ನಂಬಿಕೆಗೆ ಅರ್ಹ ವಾದ ಸಂಗತಿಯಲ್ಲ; ಅಲ್ಲದೆ ಆ ಬಗೆಯ ಊಹೆಗೆ ಅಗತ್ಯವೂ ಇಲ್ಲ. ಅವ ತಾರ ಪುರುಷರು ನಿಜವಾಗಿ ದೇವರ ಅನುಗ್ರಹವನ್ನು ಪಡೆದವರು. ಆತನ ಪ್ರಭಾವಕ್ಕೊಳಗಾಗಿ ಅವರು ಆತನ ಪ್ರಭಾವವನ್ನು ಬೀರುತ್ತಾರೆ. ಸಾಮಾನ್ಯ ಜನರು ತಮ್ಮ ಹೃದಯವನ್ನು ತೆರೆದು ಪ್ರವಾದಿಗಳ ಪ್ರಭಾವ ವನ್ನು ಹೀರಿಕೊಂಡು, ಅವರ ಭಕ್ತಿ ಭಾವವನ್ನು ಕಂಡುಕೊಂಡು, ಅವರ ದರ್ಶನವನ್ನು ಅನುಭವಿಸಿ ತಾವೂ ಅವರ ಶಾಂತಿಯನ್ನು ಕಾಣಬಹುದು.

ಇದುವರೆಗೆ ರಾನಡೆಯವರ ದೃಷ್ಟಿಯಲ್ಲಿ ದೇವರ ಸ್ವರೂಪ ಎಂಥ ದೆಂಬುದನ್ನು ವಿವೇಚಿಸಿದೆವು. ಈಗ ದೇವರಿಗೂ ಮಾನವನಿಗೂ ಇರುವ ಸಂಬಂಧವನ್ನು ಪರಿಶೀಲಿಸೋಣ. ರಾನಡೆಯವರ ಅಭಿಪ್ರಾಯದಲ್ಲಿ ಮನುಷ್ಯನು ಸಂಪೂರ್ಣವಾಗಿ ದೇವರ ಅಧೀನನು. ಆದರೆ ಮನುಷ್ಯನನ್ನು ಕುಂಬಾರನ ಕೈಯ ಮಣ್ಣಿಗೆ ಹೋಲಿಸಿ ಅವನ ವ್ಯಕ್ತಿತ್ವವನ್ನು ಶೂನ್ಯಗೊಳಿ ಸುವುದು ಅವರಿಗೆ ಇಷ್ಟವಿಲ್ಲ. ಅವರ ದೃಷ್ಟಿಯಲ್ಲಿ: (೧) ಮನುಷ್ಯನ ಆತ್ಮವೂ ದೇವರೂ ಒಂದೇ ವಸ್ತುವಲ್ಲ; ಮನುಷ್ಯನ ಆತ್ಮ ದೇವರ ಅಧೀನಕ್ಕೆ ಒಳಗಾಗಿದ್ದರೂ ಅದಕ್ಕೊಂದು ವ್ಯಕ್ತಿತ್ವವಿದೆ; ಮತ್ತು (೨) ಮನುಷ್ಯನು ದೇವರ ಅಧೀನನಾದರೂ ತನ್ನ ಕರ್ಮಗಳ ಹೊಣೆಯನ್ನು ಹೊರುವ, ಸ್ವಪ್ರ ಯತ್ನದಿಂದ ಜಿತೇಂದ್ರಿಯನಾಗುವ ಸ್ವಾತಂತ್ರ್ಯವನ್ನು ಹೊಂದಿದ್ದಾನೆ.

ಎಲ್ಲ ಧರ್ಮಗಳೂ ಮುಕ್ತಿಯನ್ನು, ಒಂದಲ್ಲ ಒಂದು ವಿಧದಲ್ಲಿ, ದೇವರ ಅನುಗ್ರಹವೆಂದು ತಿಳಿಸುತ್ತವೆ. ರಾನಡೆಯವರ ತತ್ತ್ವದ ಒಂದು ವೈಶಿಷ್ಟ್ಯವಿದು: ಮುಕ್ತಿಯ ಸಂದರ್ಭದಲ್ಲಿ ಕೂಡ ಆತ್ಮವನ್ನು ಕೇವಲ ವಸ್ತುವಾಗಿ ತಿಳಿಯುವುದಿಲ್ಲ, ಅದನ್ನೊಂದು ವ್ಯಕ್ತಿ (Person) ಯಾಗಿ ಪರಿಗಣಿಸುತ್ತಾರೆ. ಅವರು ಮುಕ್ತಿಯನ್ನು ಈ ರೀತಿಯಾಗಿ ವರ್ಣಿಸುತ್ತಾರೆ:

"ಮನುಷ್ಯನ ಆತ್ಮ ಆತ್ಮಶಿಕ್ಷಣದಿಂದಲೂ ತ್ಯಾಗದಿಂದಲೂ ಶುದ್ಧಗೊಂಡು —ಶರೀರದಲ್ಲಿ ಇದ್ದಂತೆಯೇ ಅಥವಾ ಅದನ್ನು ಕಳಚಿದಮೇಲೆ— ಬಂಧನ ಗಳಿಂದಲೂ ಆಸೆಗಳಿಂದಲೂ ಬಿಡುಗಡೆಹೊಂದಿ, ದೇವರೊಡನೆ ನಿಕಟಸಂಬಂಧವನ್ನು ಹೊಂದಲರ್ಹವಾಗಿ, ದೇವಸಾನ್ನಿಧ್ಯದ ಪವಿತ್ರ ಅನುಗ್ರಹವನ್ನು ಅರಿತು, ಆತನನ್ನು ಒಡೆಯ, ತಂದೆ, ನ್ಯಾಯಾಧಿಪತಿ ಎಂದು ತಿಳಿದು, ಭಕ್ತಿಭಾವದಿಂದ ಆತನ ಸೇವೆಯಲ್ಲಿ ನಿರತವಾಗುತ್ತದೆ. ಆತ್ಮದ ಈ ಪರಾಕಾಷ್ಠದಶೆಯೇ ಮುಕ್ತಿ.

ಮುಕ್ತಿಯ ಮಾರ್ಗವನ್ನು ಈ ರೀತಿಯಾಗಿ ವಿವರಿಸುತ್ತಾರೆ. "ದೇವರ ಅನುಗ್ರಹದಿಂದ ಮನುಷ್ಯನಿಗೆ ಮುಕ್ತಿ ದೊರೆಯುತ್ತದೆ. ಆದರೆ ಅವನು ಭಕ್ತಿ ಶ್ರದ್ಧೆಗಳಿಂದಲೂ ನಂಬಿಕೆಯಿಂದಲೂ ನಡೆದುಕೊಳ್ಳಬೇಕು. ಪ್ರಾರ್ಥನೆ ಮಾಡುತ್ತ ದೈವನಿಯಮಕ್ಕೆ ಬಾಗಿ ನಡೆಯಬೇಕು. ದೇವರಲ್ಲಿಯೂ ಮನುಷ್ಯನಲ್ಲಿಯೂ ಪ್ರೇಮದಿಂದ ನಡೆದು, ಬದುಕನ್ನು ನಿಷ್ಠೆಯಿಂದ ಶುದ್ಧವಾಗಿ ಬಾಳಬೇಕು.

ರಾನಡೆಯವರ ದೃಷ್ಟಿಯಲ್ಲಿ, ದೇವರು ಮಾನವನ ಆತ್ಮವನ್ನು ಮುಕ್ತಿಗೊಳಿಸುವುದರಲ್ಲಿ, ಕುಂಬಾರನು ಜಡವಾದ ಮಣ್ಣಿನ ವಿಷಯದಲ್ಲಿ ವರ್ತಿಸುವಂತೆ ವರ್ತಿಸುವುದಿಲ್ಲ; ಆದರೆ ಮನುಷ್ಯ ಮನುಷ್ಯನಿಗೆ ಸಹಾಯ ಮಾಡುವ ರೀತಿಯಲ್ಲಿ ನಡೆಯುತ್ತಾನೆ.

ಮನುಷ್ಯನ ಆತ್ಮವೆಂದರೇನು? ರಾನಡೆಯವರ ದೃಷ್ಟಿಯಲ್ಲಿ ಅದೊಂದು ಚೈತನ್ಯ; ಅದು ಸ್ವತಃ ಸತ್ತ್ವವುಳ್ಳದ್ದು ಮತ್ತು ಅಮರವಾದದ್ದು. ಅದರ ಸ್ವಭಾವವೇನು, ಅದರ ಮೂಲವೇನು, ಅದರ ಗುರಿಯೇನು?–ಈ ಪ್ರಶ್ನೆಗಳಿಗೆ ರಾನಡೆಯವರಲ್ಲಿ ಉತ್ತರ ದೊರೆಯುವುದಿಲ್ಲ. ಮನುಷ್ಯನ ಇಂದಿನ ಸ್ಥಿತಿ ಹಂಗಾಮಿಯಾದದ್ದೆಂದೂ, ಅವನವನ ಯೋಗ್ಯತೆಗನುಗುಣವಾಗಿ ಸುಖವೊ ದುಃಖವೊ ಮುಂದಿನ ಜಗತ್ತಿನಲ್ಲಿ ಕಾದಿರುತ್ತದೆಯೆಂದೂ ಅವರು ನಂಬಿದ್ದರು. ಆದರೆ ಮುಂದಿನ ಜಗತ್ತು ಅಥವಾ ಜೀವ ಎಂತಹುದು?–ಅದು ಬಗೆಹರಿಸಲಾರದ ರಹಸ್ಯವೆಂದು ತಿಳಿದಿದ್ದರು.

## ೧೩. ಚರಿತ್ರಕಾರ ಮತ್ತು ಶಿಕ್ಷಣ ಶಾಸ್ತ್ರಜ್ಞ

ರಾನಡೆ ಮತ್ತು ತೇಲಂಗ್ ಮಹಾರಾಷ್ಟ್ರರ ಚರಿತ್ರೆಯನ್ನು ಬರೆಯುವ ಕೆಲಸವನ್ನು ಕೈಕೊಂಡರು. ತೇಲಂಗ್ ಅದಕ್ಕಾಗಿ ವಸ್ತುವನ್ನು ಸಂಗ್ರಹಿಸಿದರು. ಆದರೆ ತೇಲಂಗ್ ಮೃತ್ಯು ವಶರಾದ್ದರಿಂದ ಒಟ್ಟಾಗಿ ಬರೆಯುವ ಯೋಜನೆ ನಿಂತು ಹೋಯಿತು. ರಾನಡೆ ಒಬ್ಬರೇ ಆ ಕೆಲಸವನ್ನು ನಿರ್ವಹಿಸಲು ಉದ್ಯುಕ್ತರಾದರು. ಅವರು "ಮರಾಠರ ಆಧಿಪತ್ಯದ ಉದಯ" (The Rise of the Maratha Power) ಎಂಬ ಒಂದು ಸಂಪುಟವನ್ನು ಮಾತ್ರ ರಚಿಸಿದರು. ಅದು ೧೯೦೦ ರಲ್ಲಿ ಪ್ರಕಟವಾಯಿತು. ಅದರಲ್ಲಿ ರಾನಡೆ--ಮಹಾರಾಷ್ಟ್ರ ಸಾಮ್ರಾಜ್ಯವೆಂದರೆ ಮಹಾರಾಷ್ಟ್ರದ ಹಿಂದೂ ದರೋಡೆಕಾರರ ಅಭ್ಯುದಯ–ಎಂದು ಪ್ರಚಲಿತವಾಗಿದ್ದ ಅಭಿಪ್ರಾಯವನ್ನು ಖಂಡಿಸಿದರು. ನೈತಿಕವಾದ ಕಾರ್ಯಕಾರಣಗಳು ಮಹಾರಾಷ್ಟ್ರ ಚರಿತ್ರೆಯಲ್ಲೂ ಕಂಡು ಬರುತ್ತವೆ ಎಂದು ತೋರಿಸಲು ರಾನಡೆ ತಮ್ಮ ಗ್ರಂಥದಲ್ಲಿ ಪ್ರಯತ್ನಿಸಿದ್ದಾರೆ. ಉದಾಹರಣೆಗೆ–ಮಹಾರಾಷ್ಟ್ರದ ಸಾಧುಸಂತರು ಘಟನೆಗಳ ವಿಕಸನದಲ್ಲಿ 'ಎಂಥ ಮಹತ್ಪಾತ್ರವನ್ನು ವಹಿಸಿದರೆಂಬುದನ್ನು ವಿವರಿಸಿದ್ದಾರೆ. ಅವರ ಧಾರ್ಮಿಕ ಚಳವಳಿಗಳು ಜನರ ಭಾವ ಕ್ರಿಯೆಗಳನ್ನು ಉನ್ನತ ಮಟ್ಟಕ್ಕೆ ಒಯ್ಯುವುದರಲ್ಲಿ ಸಹಾಯಕವಾದವು; ವಿದೇಶೀ ಆಳ್ವಿಕೆಗೆ ಎದುರಾಗಿ ಜನವನ್ನು ಹಿಂದೆಂದೂ ಯಾರೂ ಐಕ್ಯಗೊಳಿಸದ ರೀತಿಯಲ್ಲಿ ಸೇರಿಸಿ ಸಂಘಟಿಸಿದುವು.

ಗ್ರಂಥದ ಅರ್ಧಕ್ಕಿಂತ ಹೆಚ್ಚು ಭಾಗ ಶಿವಾಜಿಯ ಜೀವನ ಗತಿಯ ಚಿತ್ರಣದಿಂದ ತುಂಬಿದೆ. ಶಿವಾಜಿಯು ದೊಡ್ಡ ಯೋಧನಲ್ಲದೆ, ರಾಜನೀತಿಜ್ಞನೂ ವ್ಯವಸ್ಥಾಪಕನೂ ಆಗಿದ್ದನೆಂಬ ವಿಷಯವನ್ನು ವಿವರಿಸುತ್ತಾರೆ. ಹಿಂದಿನ ಚರಿತ್ರಕಾರರು ಆತನು ಯೋಧನೆಂಬುದನ್ನು ಮಾತ್ರ ಗಮನಿಸಿದ್ದರು.

೧೮೯೯ ರ ಫೆಬ್ರುವರಿಯಲ್ಲಿ ರಾನಡೆ "ಮಹಾರಾಷ್ಟ್ರರ ಕಾಲದ ಟಂಕಸಾಲೆಗಳು ಮತ್ತು ನಾಣ್ಯಗಳು" ಎಂಬ ಪ್ರಬಂಧವನ್ನು ಬರೆದರು; ೧೯೦೦ ರ ಜೂನ್‌ನಲ್ಲಿ "ಸಾತಾರಾ ರಾಜನ ಮತ್ತು ಪೇಷ್ವೆಯ ದಿನಚರಿಗಳು." ಎಂಬ

ವಿಷಯವಾಗಿ ಎರಡು ಲೇಖನಗಳನ್ನು ಬರೆದರು. ರಾಜ್ಯ ದಿನಚರಿಗಳಿಂದ ಆ ಕಾಲದ ಮಹಾರಾಷ್ಟ್ರ ಜನರ ಸ್ಥಿತಿ, ಅವರು ಹೇಗೆ ಬದುಕಿ ಬಾಳಿದರು, ಅವರ ಸುಖ ಸಂತೋಷಗಳು, ಅವರ ನಂಬಿಕೆಗಳು, ನೀತಿ ಧರ್ಮ ಆಚಾರ ನಡತೆಗಳು–ಇವುಗಳನ್ನೆಲ್ಲ ಕುರಿತು ಬರೆಯಲು ಸಾಧ್ಯವಾಗುವುದೆಂದು ರಾನಡೆ ಸಂತೋಷಪಟ್ಟರು.

ರಾನಡೆಯವರು ತಮ್ಮ ಜೀವಿತದ ಕೊನೆಯ ದಿನಗಳಲ್ಲಿ, ಬೊಂಬಾಯಲ್ಲಿದ್ದಾಗ, ಎರಡು ವಿಷಯಗಳನ್ನು ಕುರಿತು ಮುಖ್ಯವಾಗಿ ಯೋಚಿಸುತ್ತಿದ್ದರು: ಒಂದು, ಮಹಾರಾಷ್ಟ್ರದ ಚರಿತ್ರೆಗೆ ಸಂಬಂಧಿಸಿದ್ದು. ತಮ್ಮ ಸಂಶೋಧನೆಗಳಿಂದ ಶಿವಾಜಿಯ ಮತ್ತು ಪೇಷ್ವೆಯರ ಕಾಲದ ಚಾರಿತ್ರಿಕ ಘಟನೆಗಳ ನಿಜ ಸ್ವರೂಪವನ್ನು ವಿವರಿಸಲು ಅವರು ನಡಸಿದ ಪ್ರಯತ್ನಗಳನ್ನು ಆಗಲೆ ವಿವೇಚಿಸಿದ್ದೇವೆ. ಇನ್ನೊಂದು ವಿಷಯ, ಮಹಾರಾಷ್ಟ್ರ ಯುವಕರ ವಿಶ್ವವಿದ್ಯಾನಿಲಯದ ಜೀವನ ಗತಿಗೆ ಸಂಬಂಧಪಟ್ಟದ್ದು.

ಶಿಕ್ಷಣ ವಿಷಯಗಳು ರಾನಡೆಯವರಿಗೆ ಪ್ರಿಯವಾಗಿದ್ದುದರಿಂದ ಅವರು ಬೊಂಬಾಯಿಗೆ ವರ್ಗವಾಗಿ ಬಂದೊಡನೆ ವಿಶ್ವವಿದ್ಯಾನಿಲಯದ ವ್ಯವಸ್ಥೆಯಲ್ಲಿ ಆಸಕ್ತಿ ವಹಿಸಿದರು. ಅವರು ಈ ವೇಳೆಗೇ ವಿಶ್ವವಿದ್ಯಾನಿಲಯದ ಫೆಲೊ ಆಗಿದ್ದರು. ಈಗ ಸೆನೆಟಿನ ಮತ್ತು ಸಿಂಡಿಕೇಟಿನ ಸದಸ್ಯರೂ, ಮತ್ತು ಕಲಾವಿಭಾಗದ ಅಧ್ಯಕ್ಷ (Dean) ರೂ ಆದರು.

ವಿಶ್ವ ವಿದ್ಯಾನಿಲಯಕ್ಕಾಗಿ ಅವರು ಎಸಗಿದ ಮುಖ್ಯ ಸೇವೆಯೆಂದರೆ, ದೇಶ ಭಾಷೆಗಳನ್ನು ಪಾಠಕ್ರಮದಲ್ಲಿ ಪುನಃ ಸೇರಿಸಿದ್ದು. ರಾನಡೆಯವರ ವಿದ್ಯಾರ್ಥಿ ದಶೆಯಲ್ಲಿ ದೇಶ ಭಾಷೆಗಳಿಗೆ ಸಂಸ್ಕೃತದೊಡನೆ ಸಮಾನ ಸ್ಥಾನವಿತ್ತು. ಅವರು ತಮ್ಮ ಬಿ. ಎ. ಪರೀಕ್ಷೆಗೆ ಸಂಸ್ಕೃತದ ಬದಲು ಮರಾಠಿಯನ್ನು ತೆಗೆದುಕೊಂಡಿದ್ದರು.* ೧೮೬೭ ರಲ್ಲಿ, ಶಿಕ್ಷಣ ಶಾಖೆಯಲ್ಲಿದ್ದ ಆಕ್ಸ್‌ಫರ್ಡ್ ವಿದ್ವಾಂಸರ ಪ್ರಭಾವದಿಂದ, ದೇಶ ಭಾಷೆಗಳನ್ನು ಪಾಠಕ್ರಮದಿಂದ ತೆಗೆದುಹಾಕಲಾಯಿತು. ೧೮೮೧ ರಲ್ಲಿ, ಪಾಠಕ್ರಮದಲ್ಲಿ ಅವುಗಳನ್ನು ಪುನಃ

* ೧೮೬೩–೬೪ ರಲ್ಲಿ ರಾನಡೆ ಬೋಧಕರೊಬ್ಬರ ಸಹಾಯದಿಂದ ಸಂಸ್ಕೃತವನ್ನು ಕಲಿಯುತ್ತಿದ್ದರು. ೧೮೫೯ ರಲ್ಲಿ ಅವರು ಲ್ಯಾಟಿನ್ ಭಾಷೆಯನ್ನು ಅಭ್ಯಾಸ ಮಾಡುತ್ತಿದ್ದರು.

ಸೇರಿಸುವುದಕ್ಕಾಗಿ ಚಳವಳಿ ನಡೆಯಿತು. ೧೮೮೮ ರಲ್ಲಿ ಮತ್ತು ೧೮೯೦ ರಲ್ಲಿ ಅವುಗಳನ್ನು ಪಾಠಕ್ರಮದಲ್ಲಿ ಸೇರಿಸಲು ಸೆನೆಟಿನಲ್ಲಿ ಪ್ರಯತ್ನಗಳು ನಡೆದು ವಿಫಲವಾದುವು.

೧೮೯೪ ರಲ್ಲಿ ರಾನಡೆ ಈ ವಿಷಯವನ್ನು ಎತ್ತಿಕೊಂಡರು. ಸಂಸ್ಕೃತ ಪಾರಸಿ ಮೊದಲಾದ ಪುರಾತನ ಭಾಷೆಗಳ ಜೊತೆಯಲ್ಲಿ ಪಾಠಕ್ರಮದಲ್ಲಿ ದೇಶಭಾಷೆಯ ಒಂದು ಗ್ರಂಥವನ್ನು ಸೇರಿಸಬೇಕೆಂಬುದು ಅವರ ಅಭಿಪ್ರಾಯವಾಗಿತ್ತು. ಹಾಗೆ ಮಾಡುವುದರಿಂದ ಜಾತಿ ಮತ ಭೇದಗಳಿಗೆ ಅವಕಾಶ ಮಾಡಿಕೊಟ್ಟಂತೆ ಆಗುವುದಿಲ್ಲವೆಂದೂ, ತಮ್ಮ ತಂದೆ ತಾಯಿ ಹೆಂಡತಿ ಮಕ್ಕಳು ಸೋದರ ಸೋದರಿಯರು ಆಡುವ ಭಾಷೆಗೆ ಸೇರಿದ ಒಂದು ಗ್ರಂಥವನ್ನು ವ್ಯಾಸಂಗ ಮಾಡುವುದಾಗಲಿ, ಅದನ್ನು ಕುರಿತು ಕೆಲವು ಪಂಕ್ತಿಗಳನ್ನು ಪರೀಕ್ಷೆಯಲ್ಲಿ ಬರೆಯುವುದಾಗಲಿ ವಿದ್ಯಾರ್ಥಿಗಳಿಗೆ ಹೊರೆಯಾಗಲಾರದೆಂದೂ ರಾನಡೆ ಸೆನೆಟಿನಲ್ಲಿ ವಾದಿಸಬೇಕಾಯಿತು. ಅವರ ವಾದಕ್ಕೆ ಸೆನೆಟ್ ಪುರಸ್ಕಾರ ಕೊಡಲಿಲ್ಲ. ೧೮೯೮ ರಲ್ಲಿ ಪುನಃ ದೇಶಸಾಹಿತ್ಯದ ಠರಾವನ್ನು ತಂದರು. ಇದಕ್ಕೆ ಮೊದಲು ಮರಾಠೀ ಸಾಹಿತ್ಯದ ಬೆಳವಣಿಗೆಯನ್ನು ಕುರಿತು ಐದು ಲೇಖನಗಳನ್ನು ಬರೆದು ಪ್ರಸಿದ್ಧಿಸಿದ್ದರು. ವಿಶ್ವವಿದ್ಯಾನಿಲಯದ ಪಾಠಕ್ರಮದಲ್ಲಿ ಸೇರಿಸಲು ತಕ್ಕಷ್ಟು ಉತ್ಕೃಷ್ಟ ಗ್ರಂಥಗಳು ಮರಾಠೀ ಸಾಹಿತ್ಯದಲ್ಲಿ ರಚಿತವಾಗಿವೆ ಎಂದು ತೋರಿಸುವುದು ಅವರ ಲೇಖನಗಳ ಉದ್ದೇಶವಾಗಿತ್ತು. ವಿಷಯವನ್ನು ಪರಿಶೀಲಿಸುವುದಕ್ಕಾಗಿ ಸಿಂಡಿಕೇಟ್ ಒಂದು ಸಮಿತಿಯನ್ನು ನೇಮಿಸಿತು. ಸಮಿತಿಯಿಂದ ಅನುಕೂಲವಾದ ವರದಿ ಬಂದಮೇಲೆ ದೇಶಭಾಷೆಗಳನ್ನು ಎಂ.ಎ., ಪಾಠಕ್ರಮದಲ್ಲಿ ಸೇರಿಸಬಹುದೆಂಬ ನಿರ್ಣಯವಾಯಿತು. ಈ ವೇಳೆಗೆ ರಾನಡೆ ತೀರಿಹೋಗಿ ಕೆಲವು ವಾರಗಳಾಗಿದ್ದವು.

ವಿದ್ಯಾರ್ಥಿಗಳ ದೇಹಾರೋಗ್ಯ ಸ್ಥಿತಿಯನ್ನು ಉತ್ತಮಪಡಿಸುವ ವಿಷಯವೂ ರಾನಡೆಯವರ ಗಮನವನ್ನು ಸೆಳೆದಿತ್ತು. ಯೋಚಿಸಿದ ಕೆಲಸವನ್ನು ಪರಿಷ್ಕಾರವಾಗಿ ನಡಸುವುದು ರಾನಡೆಯವರ ಪದ್ಧತಿ. ಅದಕ್ಕನುಸಾರವಾಗಿ, ತಮ್ಮ ತಮ್ಮ ಸ್ಥಳಗಳಲ್ಲಿ ಸಭೆ ಸೇರಿಸಿ ವಿಷಯವನ್ನು ಚರ್ಚಿಸುವಂತೆ ೪೦೦ ಜನರಿಗೆ ಪತ್ರ ಬರೆದರು. ೧೪೦ ಜನರಿಂದ ಉತ್ತರಗಳು ದೊರೆತವು. ಹೀಗೆ ಪದವೀಧರರ ಅಭಿಪ್ರಾಯಗಳನ್ನು ಶೇಖರಿಸಿ, ವಿದ್ಯಾರ್ಥಿಗಳ ವಾಸ

ಸ್ಥಿತಿಯನ್ನು ವಿಚಾರಿಸಿ, ಮರಣ ಸಂಖ್ಯೆಯನ್ನು ಪರಿಶೀಲಿಸಿ, ಬಡತನ ಮತ್ತು ವ್ಯಾಸಂಗಗಳ ಹೊರೆ, ಇವು ವಿದ್ಯಾರ್ಥಿಗಳ ಅಕಾಲ ಮರಣಕ್ಕೆ ಕಾರಣವೆಂಬ ನಿರ್ಣಯಕ್ಕೆ ಬಂದರು. ಡಾ|| ಭಂಡಾರ್ಕರರೂ ಈ ವಿಷಯದಲ್ಲಿ ಸಂಶೋಧನೆ ನಡಸಿ ಹಿಂದು ಸಮಾಜದ ಸ್ಥಿತಿಯೇ ವಿದ್ಯಾರ್ಥಿಗಳು ತರುಣ ವಯಸ್ಸಿನಲ್ಲಿ ಮೃತಿ ಹೊಂದಲು ಕಾರಣವೆಂಬ ತೀರ್ಮಾನಕ್ಕೆ ಬಂದರು. ಈ ಭಿನ್ನಾಭಿಪ್ರಾಯಗಳಿಂದ ಈ ಪ್ರಸಿದ್ಧ ಪುರುಷರಲ್ಲಿ ಒಂದು ವಾಗ್ಯುದ್ಧ ನಡೆಯಿತು.

ವಿದ್ಯಾರ್ಥಿಗಳ ಪಠ್ಯ ವಿಷಯಗಳ ಹೊರೆಯನ್ನು ಕಡಮೆ ಮಾಡಲು ರಾನಡೆ ೧೮೯೫ ರಲ್ಲಿ ಪ್ರಯತ್ನ ನಡಸಿದರು. ಅವರ ಪ್ರಯತ್ನ ಯಶಸ್ವಿಯಾಗಲಿಲ್ಲ.

ರಾನಡೆಯವರಿಗೆ ಭಾರತದ ಕೈಗಾರಿಕಾ ಶಿಕ್ಷಣದ ಪ್ರಗತಿಯಲ್ಲಿ ವಿಶೇಷವಾದ ಆಸಕ್ತಿ ಇತ್ತೆಂಬುದನ್ನು ಬಲ್ಲೆವು. ಕೈಗಾರಿಕಾ ಶಿಕ್ಷಣಕ್ಕಾಗಿ ಎರ್.ಜೆ. ತಾತಾ ೩೦ ಲಕ್ಷ ರೂಪಾಯಿಗಳನ್ನು ದಾನ ಮಾಡಿದ್ದರು. ಆ ಹಣದ ವಿನಿಯೋಗ ವ್ಯವಸ್ಥೆಯ ಸಲಹಾ ಸಮಿತಿಯ ಸದಸ್ಯರಾಗಿ ರಾನಡೆ ನಿಯೋಜಿತರಾದರು. ಆ ಸಮಿತಿಯ ಕಾರ್ಯದ ಫಲವಾಗಿ ಬೆಂಗಳೂರಲ್ಲಿರುವ ತಾತಾ ಕೈಗಾರಿಕಾ ಸಂಶೋಧನ ಮಂದಿರ (Tata Industria Research Institute) ರೂಪುಗೊಂಡಿತು.

ವಿಶ್ವ ವಿದ್ಯಾನಿಲಯದಲ್ಲಿ ರಾನಡೆಯರ ಪ್ರಭಾವ ಎಷ್ಟರಮಟ್ಟಿನದಾಗಿತ್ತೆಂಬುದನ್ನು ತಿಳಿಯಲು ವೈಸ್ ಛಾನ್ಸಲರ್ ಜಸ್ಟಿಸ್ ಕ್ಯಾಂಡಿಯವರ ಮಾತುಗಳನ್ನು ಇಲ್ಲಿ ಉದ್ಧರಿಸಬಹುದು :

"ಏನಾದರೂ ತೊಡಕಾದ ವಿಷಯ ತಲೆಯೆತ್ತಿದರೆ ಎಲ್ಲರೂ ಪರಿಹಾರಕ್ಕಾಗಿ ರಾನಡೆಯವರ ಕಡೆ ನೋಡುತ್ತಿದ್ದರು. ಕಷ್ಟಸಮಯದಲ್ಲಿ ಅವರಂತೆ ಪರಿಹಾರ ಸೂಚಿಸುವವರು ಬೇರೆ ಯಾರೂ ಇರಲಿಲ್ಲ. ನಾವೆಲ್ಲ ಅವರನ್ನು ಗುರುಗಳೆಂದು ಭಾವಿಸಿದ್ದೆವು. ಈ ಮಾತು ಅತಿಶಯೋಕ್ತಿಯೆಂದು ಯಾರೂ ಹೇಳಲಾರರು. ಯಾವುದೇ ಕಷ್ಟವಿರಲಿ, ಅದು ಯಾರಿಗೇ ಬರಲಿ, ರಾನಡೆ ವಿಮುಖರಾಗದೆ ಸಹಾಯ ಮಾಡುತ್ತಿದ್ದರು. ಅದು ಖಂಡಿತ. ಅವರಲ್ಲಿ ಸಾಧುಗಳ ತಾಳ್ಮೆಯಿತ್ತು, ಕಪಟವಾಗಲಿ ಮಿಥ್ಯಾಚಾರವಾಗಲಿ ಇರಲಿಲ್ಲ. ಸ್ವಾಭಾವಿಕವಾಗಿಯೇ ಜನರು ಅವರಿಂದ ಆಕರ್ಷಿತರಾಗುತ್ತಿದ್ದರು."

# ೧೪. ಕೊನೆಯ ದಿನಗಳು

೧೮೯೫ ರಲ್ಲಿ ರಾನಡೆಯವರ ದೇಹಸ್ಥಿತಿ ಕುಗ್ಗಲಾರಂಭಿಸಿತು. ಅಲ್ಲಿಂದ ಮುಂದೆ ವರ್ಷ ವರ್ಷಕ್ಕೆ ದೇಹಾರೋಗ್ಯ ಹೆಚ್ಚು ಹೆಚ್ಚಾಗಿ ಕೆಡುತ್ತ ಹೋಯಿತು. ಹವಾ ಬದಲಾವಣೆಗಾಗಿ ಈ ಕಾಲದಲ್ಲಿ ಲೋಣಾವಳ ಮಾಥೆರಾನ್ ಅಥವಾ ಮಹಾಬಲೇಶ್ವರ, ಅಥವಾ ಬಾಂದ್ರದ ಸಮುದ್ರತೀರ ಈ ಸ್ಥಳಗಳಿಗೆ ಹೋಗುತ್ತಿದ್ದರು. ವಿಶ್ರಾಂತಿ ತೆಗೆದುಕೊಳ್ಳುವುದರ ಬದಲು ಅಲ್ಲಿಯೂ ಹತ್ತು ಗಂಟೆಯಿಂದ ನಾಲ್ಕು ಗಂಟೆಯವರೆಗೆ ಓದುತ್ತ ಬರೆಯುತ್ತ ಕಾಗದ ಪತ್ರಗಳಿಗೆ ಉತ್ತರ ಬರೆಯುತ್ತ ಕಾಲಕಳೆಯುತ್ತಿದ್ದರು. ರಮಾಬಾಯಿ ಶ್ರಮ ಪಡಬಾರದೆಂದು ಹೇಳಿದರೆ, ಸುಮ್ಮನೆ ಕಾಲಕಳೆಯುವುದು ತಮಗೆ ವಿಶ್ರಾಂತಿ ಎನಿಸದೆಂದು ನುಡಿಯುತ್ತಿದ್ದರು. ೧೮೯೯ ರ ಬೇಸಗೆಯಲ್ಲಿ ಮಹಾಬಲೇಶ್ವರದಲ್ಲಿದ್ದಾಗ ಬಿಸಿಲ ಬೇಗೆಯಿಂದ ಸ್ಮೃತಿ ತಪ್ಪಿದ್ದರು. ಕಡೆಯ ದಿನಗಳಲ್ಲಿ ದೃಷ್ಟಿ ತೀರ ಮಂದವಾಗಿ ದೇಹಸ್ಥಿತಿ ತೀರ ಅತೃಪ್ತಿಕರವಾಗಿದ್ದುದರಿಂದ ಓದುವುದಕ್ಕೆ ಬರೆಯುವುದಕ್ಕೆ ಒಬ್ಬಿಬ್ಬರು ವಿದ್ಯಾರ್ಥಿಗಳನ್ನು ನೇಮಿಸಿಕೊಳ್ಳುತ್ತಿದ್ದರು. ಹೀಗೆ ರಾನಡೆಯವರ ಸಾಮೀಪ್ಯವನ್ನು ಹೊಂದಿ ಅವರ ನಿಕಟ ಸಂಪರ್ಕವನ್ನು ಹೊಂದಿದವರಲ್ಲಿ ವಿ. ಜಿ. ಕಾಳೆಯವರು ಒಬ್ಬರು. ತಮ್ಮ ಅರ್ಥಶಾಸ್ತ್ರ ವಿಷಯಕ ಲೇಖನಗಳಿಂದಲೂ, ಕೌನ್ಸಿಲ್ ಆಫ್ ಸ್ಟೇಟಿನ ಸದಸ್ಯರಾಗಿಯೂ ಸುಂಕ ಸಮಿತಿಯ ಸದಸ್ಯರಾಗಿಯೂ ನಿರ್ವಹಿಸಿದ ಕೆಲಸಗಳಿಂದಲೂ ಕಾಳೆ ಪ್ರಸಿದ್ಧರಾಗಿರುತ್ತಾರೆ.

೧೮೯೯ ನೆಯ ವರ್ಷದ ಕೊನೆ ಕೊನೆಗೆ ರಾನಡೆಯವರಿಗೆ ಇಹಲೋಕ ವ್ಯಾಪಾರಗಳಲ್ಲಿ ಆಸಕ್ತಿ ಕಡಮೆಯಾಗುತ್ತ ಬಂದಿತು. ಕೈಯಲ್ಲಿ ಪುಸ್ತಕವನ್ನೊ ಪತ್ರಿಕೆಯನ್ನೊ ಹಿಡಿದಿರುತ್ತಿದ್ದರು, ಮನಸ್ಸು ಮಾತ್ರ ಬೇರೆ ಎಡೆಯಲ್ಲಿರುತ್ತಿತ್ತು. ರಮಾಬಾಯಿ ಇದೆಲ್ಲವನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದರು. ರಾನಡೆ ಆಹಾರ ಪಾನೀಯಗಳನ್ನು ಕಡಮೆಮಾಡಿದರು. ರಮಾಬಾಯಿ ಹಣ್ಣುಗಳನ್ನೂ ರುಚಿಯಾದ ತಿಂಡಿಗಳನ್ನೂ ಮುಂದಿಟ್ಟು ಬಲವಂತ ಮಾಡುವರು, ರಾನಡೆ ತಿನ್ನದಿದ್ದರೆ ತಾವು ಮಾಡಿದ ತಿಂಡಿ



ರಾನಡೆಯವರ ಪ್ರತಿಮೆ, ಬೊಂಬಾಯಿ

ಪ್ರತಿಮೆಯ ಕೆಳಗೆ ಕೊರೆದಿರುವ ಮಾತುಗಳು :

In Appreciation
Of His Great Services
As Scholar Judge Citizen Patriot
And Social Reformer
This Statue
Has Been Erected By Public
Subscription Here And In India
To The Memory of
MAHADEV GOVIND RANADE, M.A. LL.B., C.I.E.

ಜನ್ಮ : ೧೮೪೨ ಮರಣ : ೧೯೦೧

ರುಚಿಯಾಗಿಲ್ಲವೇನೋ ಎಂದು ಕೇಳುವರು. ' ಚೆನ್ನಾಗಿದೆ, ಆದರೆ ಚೆನ್ನಾಗಿದೆಯೆಂದು ತಿನ್ನುವುದಕ್ಕಾಗುತ್ತದೆಯೆ ? ಆಹಾರದ ವಿಷಯದಲ್ಲಿ ಮಿತವಾಗಿರ ಬೇಕು; ಎಂದು ರಾನಡೆ ನುಡಿಯುವರು. ಮನುಷ್ಯ ತನ್ನ ಪಶು ಶಕ್ತಿಯನ್ನು ಕುಗ್ಗಿಸಿ ದೈವೀಶಕ್ತಿಯನ್ನು ಬೆಳಸಿಕೊಳ್ಳ ಬೇಕೆಂದು ಹೇಳುತ್ತ ಒಮ್ಮೆ ಹೀಗೆ ತಿಳಿಸಿದರು :

> ನಾವು ದೇವರ ಅಂಶವೆಂದು ಹೇಳುವುದಾದರೆ ನಮ್ಮಲ್ಲಿ ಆತನ ಗುಣಗಳು ವ್ಯಕ್ತವಾಗಬೇಡವೆ ? ಪೂರ್ಣವಾದ ಆತ್ಮ ಶಕ್ತಿಯನ್ನು ಹೊಂದಿದ ದಿವ್ಯ ಪುರುಷರಿದಾರೆ; ನಾನಾ ಐಹಿಕ ವ್ಯಾಪಾರಗಳಲ್ಲಿ ಮುಳುಗಿ ಇಂದ್ರಿಯ ವಶರಾಗಿರುವ ನಮ್ಮಂಥವರಿಗೆ ಆ ಬಗೆಯ ಪರಿಪೂರ್ಣತೆ ಅಸಾಧ್ಯ. ಆದರೆ ನಮ್ಮ ಅಲ್ಪ ಶಕ್ತಿಗೆ ಸಾಧ್ಯವಿರುವಷ್ಟನ್ನಾದರೂ ಸಾಧಿಸಲು ನಾವು ಶ್ರಮಿಸಬೇಕು.

೧೯೦೦ ರ ಸೆಪ್ಟೆಂಬರ್ ತಿಂಗಳಿನಲ್ಲಿ ರಮಾಬಾಯಿ ಕಾಹಿಲೆ ಮಲಗಿದರು. ಅವರು ಶಸ್ತ್ರಚಿಕಿತ್ಸೆ ಹೊಂದಬೇಕೆಂದು ಡಾಕ್ಟರು ಹೇಳಿದರು. ಶಸ್ತ್ರಚಿಕಿತ್ಸೆ ಇಲ್ಲದೆಯೆ ಗುಣ ಹೊಂದಬಹುದೆಂದು ರಾನಡೆ ಸಲಹೆ ಮಾಡಿದರೂ, ಚಿಕಿತ್ಸೆ ಅನಿವಾರ್ಯವಾಯಿತು. ರಾನಡೆಯವರನ್ನು ವಿಚಾರಿಸಿಕೊಳ್ಳುವವರು ಯಾರೆಂಬ ಯೋಚನೆಗೆ ಇಟ್ಟುಕೊಂಡಿತು ರಮಾಬಾಯಿಯವರಿಗೆ. ತಮಗೆ ಯಾವ ಅರ್ಹತೆ ಇಲ್ಲದಿದ್ದರೂ ಅಂಥ ಪತಿಯನ್ನು ಕರುಣಿಸಿದ ದೇವರ ವಿಷಯದಲ್ಲಿ ಅವರು ಕೃತಜ್ಞರಾಗಿದ್ದರು.

ಶಸ್ತ್ರ ಚಿಕಿತ್ಸೆಯಾದ ಮೂರು ವಾರದ ಬಳಿಕ ಇಬ್ಬರೂ ಮಾಥೆರಾನಿಗೆ ಹೋಗಬೇಕೆಂದಿದ್ದರು. ಇನ್ನು ಒಂದು ವಾರ ಕಾಲ ರಮಾಬಾಯಿ ಎಲ್ಲಿಗೂ ಕದಲಕೂಡದೆಂದು ಡಾಕ್ಟರು ಹೇಳಿದ್ದರಿಂದ, ರಾನಡೆ ತಾವು ಒಬ್ಬರೆ ಅಲ್ಲಿಗೆ ವಿಶ್ರಾಂತಿಗಾಗಿ ಹೋಗಬೇಕಾಯಿತು.

ಆಗಸ್ಟ್ ತಿಂಗಳ ವೇಳೆಗೆ ರಾನಡೆಯವರಲ್ಲಿ ಹೃದಯದ ಎಳವು ಸ್ಪಷ್ಟವಾಗಿ ಕಾಣಿಸಿಕೊಳ್ಳಲಾರಂಭಿಸಿತು. ಸಾಮಾನ್ಯವಾಗಿ ಪ್ರತಿದಿನ ರಾತ್ರೆ ೧೦–೨೦ ನಿಮಿಷಗಳ ಕಾಲ ತೊಂದರೆ ಕೊಡುತ್ತಿತ್ತು. ಮಾಥೆರಾನಿಗೆ ಹೋದ ಹತ್ತು ದಿನಗಳಲ್ಲಿ ಸೆಳೆತ ಉಲ್ಬಣವಾದದ್ದರಿಂದ ರಮಾಬಾಯಿ ಅಲ್ಲಿಗೆ ಹೊರಟು ಬರಬೇಕಾಯಿತು. ರಜಾ ಮುಗಿಯುವವರೆಗೆ ಅಲ್ಲಿದ್ದು ಅನಂತರ ಇಬ್ಬರೂ ಬೊಂಬಾಯಿಗೆ ಹಿಂದಿರುಗಿದರು. ರಾನಡೆ ಹೃದಯ ವೇದನೆಯಿಂದ ಮೊದಮೊದಲು ಆತಂಕಗೊಳ್ಳುತ್ತಿದ್ದರು. ಅಕ್ಟೋಬರ್ ತಿಂಗಳಿನಿಂದಾಚೆ ಅವರು ಅದರ ವಿಷಯದಲ್ಲಿ ಉದಾಸೀನ ಭಾವವನ್ನು ತಳೆ

ದರು. ಒಬ್ಬರಿಗೂ ತಿಳಿಸದೆ ನೋವನ್ನು ಮೌನವಾಗಿ ಸಹಿಸಬೇಕೆಂದು ನಿರ್ಧರಿಸಿದರು. ನೋವು ಜಾಸ್ತಿಯಾದಾಗ ಮಾತ್ರ ಹಾಸಿಗೆಯಲ್ಲಿ ಪಕ್ಕಕ್ಕೆ ತಿರುಗುವಾಗ ನರಳುವರು. ಹೊರಗಿನವರಿಗೆ ಸಾಮಾನ್ಯವಾಗಿ ರೋಗದ ಸುಳುವನ್ನು ಕೊಡುತ್ತಿರಲಿಲ್ಲ. ರಮಾಬಾಯಿ ಮಾತ್ರ ಸೂಕ್ಷ್ಮವಾಗಿ ಎಲ್ಲವನ್ನು ಅರಿತು ದುಃಖದಿಂದ ಅಳುತ್ತಿದ್ದರು.

ಸಾಧ್ಯವಾದ ಮಟ್ಟಿಗೂ ವಿಶ್ರಾಂತಿ ತೆಗೆದುಕೊಳ್ಳುವಂತೆ ಡಾಕ್ಟರು ಸಲಹೆ ಮಾಡಿದರು. ಮನೆಯವರೂ ಅದೇ ರೀತಿ ಒತ್ತಾಯ ಮಾಡುತ್ತಿದ್ದರು. ರಾನಡೆ ಮಾತ್ರ ಯಾವುದನ್ನೂ ಗಮನಿಸದೆ ದಿನವೆಲ್ಲ ಓದು ಬರಹಗಳನ್ನು ಸಾಗಿಸುತ್ತಿದ್ದರು.

೧೯೦೦ ರ ನವೆಂಬರ್ ೨೪ ರಲ್ಲಿ ಬೊಂಬಾಯಿಯ ಫ್ರಾಂಜೀ ಕೊವಸ್ಜೀ ಸಂಸ್ಥೆಯಲ್ಲಿ ರಾನಡೆ ದಾದಾಭಾಯಿ ನವರೋಜಿಯವರ ಭಾವ ಚಿತ್ರವನ್ನು ಅನಾವರಣ ಮಾಡಿದರು. ಭಾರತ ಮಹಾಕುಲ ವೃದ್ಧರಾದ ದಾದಾಭಾಯಿಯವರ ಗುಣಗಳನ್ನು ವಿವರಿಸಿ, "ಆಧುನಿಕ ಜೀವನದ ಪರಿಸ್ಥಿತಿಯಲ್ಲಿ ಭವಿಷ್ಯದ್ಭಾರತದಲ್ಲಿ ಕೇವಲ ಜಾತಿ ಮತ ಬಣ್ಣಗಳ ಭೇದಕ್ಕೆ ಅವಕಾಶವಿರುವುದಿಲ್ಲ. ಎಷ್ಟೋ ಕಾಲದಿಂದ ನಮ್ಮನ್ನೆಲ್ಲ ಬೇರೆ ಬೇರೆ ಮಾಡಿ, ಸಂಯುಕ್ತ ಭಾರತಕ್ಕೆ ಅಡ್ಡಿಯಾದ ಎಲ್ಲ ಸ್ಥಿತಿಗತಿಗಳನ್ನೂ ಮರೆತು ನಾವೆಲ್ಲ ಎಂದೆಂದಿಗೂ ಭಾರತೀಯರಾಗಿರುತ್ತೇವೆಂದು ಆಶಿಸೋಣ." ಎಂಬ ಆಶೆಯನ್ನು ವ್ಯಕ್ತಪಡಿಸಿದರು. ಮುಂದುವರೆಯುತ್ತ, "ನಾವೀಗ ಭಾರತದ ಪುನರ್ರಚನೆಯ ಮೂರನೆಯ ಹಂತದಲ್ಲಿದೇವೆ. ಆ ಪರಿಸ್ಥಿತಿಯನ್ನು ಮುಟ್ಟುವುದಕ್ಕೆ ಬೇಕಾದ ಕರ್ತವ್ಯಗಳನ್ನೆಲ್ಲ ದಾದಾಭಾಯಿ ನಿರ್ವಹಿಸಿದರು. ಪುರಾತನ ಭಾರತವನ್ನು ನಾವು ಪುನಃ ನಿರ್ಮಿಸಲಾರೆವು, ಆದರೆ ಭವಿಷ್ಯದ್ಭಾರತವನ್ನು ರೂಪಿಸುವ, ಲಕ್ಷಣಗೊಳಿಸುವ ಕಾರ್ಯ ನಮ್ಮದೇ ಆಗಿರುತ್ತದೆ" ಎಂದು ಸ್ಪಷ್ಟಪಡಿಸಿದರು. ಭಾಷಣ ಮಾಡುತ್ತಿದ್ದಾಗ ಒಂದು ಬಾರಿ ಹೃದಯದ ಎಳವಿಗೆ ಒಳಗಾದರು. ಆಗ ಹತ್ತಿರದ ಕಂಬವನ್ನು ಒರಗಿನಿಂತು ಮಾತನ್ನು ಮುಂದುವರಿಸಿಕೊಂಡು ಹೋದರು. ಸಭಿಕರಿಗೆ ವೇದನೆಯ ಪತ್ತೆಕೊಡಲಿಲ್ಲ.

೧೯೦೦ ರ ಡಿಸೆಂಬರಿನಲ್ಲಿ ಲಾಹೋರಿನಲ್ಲಿ ಸೇರಲಿದ್ದ ಸೋಷಿಯಲ್ ಕಾನ್ಫರೆನ್ಸಿಗಾಗಿ "ವಸಿಷ್ಠ ಮತ್ತು ವಿಶ್ವಾಮಿತ್ರ" ಎಂಬ ಲೇಖವನ್ನು ಬರೆ

ದಿದ್ದರು. ಹೃದಯದ ವೇದನೆ ಹೆಚ್ಚಾದದ್ದರಿಂದ ಡಾಕ್ಟರ ಸಲಹೆಯನ್ನು ಅನುಸರಿಸಿ ಕಾನ್ಫರೆನ್ಸಿಗೆ ಹೊರಡುವುದನ್ನು ನಿಲ್ಲಿಸಿದರು. ತಾವು ಬರೆದ ಲೇಖವನ್ನು ಸ್ನೇಹಿತರಿಗೆ ಓದಿ ಹೇಳಿದರು. ೧೮ ವರ್ಷಗಳಿಂದ ಒಂದು ಬಾರಿಯೂ ಬಿಡದಂತೆ ಕಾನ್ಫರೆನ್ಸಿನಲ್ಲಿ ಹಾಜರಿದ್ದದ್ದನ್ನು ತಿಳಿಸಿದರು. ಆ ಬಾರಿ ಹೋಗಲಾಗದಿದ್ದುದಕ್ಕಾಗಿ ಅವರ ಕಣ್ಣುಗಳು ಒದ್ದೆಯಾದವು. ಗೋಖಲೆ ಚಂದಾವರ್ಕರಂಥ ಶಿಷ್ಯರು ತಮ್ಮ ಕೆಲಸವನ್ನು ಮುಂದುವರಿಸುವರೆಂಬ ಸಮಾಧಾನವಿತ್ತು ಮನಸ್ಸಿನಲ್ಲಿ.

ಎರಡು ದಿನಗಳನಂತರ ರಾನಡೆ ಲೋಣಾವಳಕ್ಕೆ ಹೋದರು. ಅಲ್ಲಿ ಹಿಂದು ಕಾನೂನಿನ ರಚನೆಗೆ ಅಗತ್ಯವಾದ ಧರ್ಮಶಾಸ್ತ್ರ ಗ್ರಂಥಗಳನ್ನು ಅಭ್ಯಾಸ ಮಾಡುತ್ತ, ಪಾಠಗಳನ್ನು ಸಂಗ್ರಹಿಸುವುದರಲ್ಲಿಯೂ, ಸಿ. ವೈ. ಚಿಂತಾಮಣಿಯವರ ಸಂಪಾದಕತ್ವದಲ್ಲಿ ಪ್ರಕಟವಾಗಲಿದ್ದ 'ಸಮಾಜ ಸುಧಾರಣೆ' ಎಂಬ ಗ್ರಂಥಕ್ಕೆ ಒಂದು ಪ್ರಬಂಧವನ್ನು ಸಿದ್ಧಗೊಳಿಸುವುದರಲ್ಲಿಯೂ ನಿರತರಾದರು. ಹತ್ತು ದಿನಗಳ ಕಾಲ ಅಲ್ಲಿದ್ದರು. ದೇಹಸ್ಥಿತಿ ಕೆಡುತ್ತ ಬಂದಿತು. ಜನವರಿಯ ಆದಿ ಭಾಗದಲ್ಲಿ ಬೊಂಬಾಯಿಗೆ ಹಿಂದಿರುಗಿದವರು ಆರು ತಿಂಗಳ ರಜೆಗಾಗಿ ಹೈಕೋರ್ಟಿಗೆ ಪತ್ರ ಬರೆದರು. ರಜೆಯ ನಂತರ ಕೆಲಸದಿಂದ ನಿವೃತ್ತಿ ಹೊಂದುವುದಾಗಿ ರಮಾಬಾಯಿಗೆ ತಿಳಿಸಿದರು. ೧೪ ನೆಯ ತಾರೀಕಿನ ದಿನ ಅವರ ದೇಹಸ್ಥಿತಿ ಚಿಂತಾಜನಕವಾಯಿತು. ೧೬ ನೆಯ ತಾರೀಕಿನ ದಿನ ಉತ್ತಮಗೊಂಡರು; ಮನಸ್ಸು ನಿರ್ಮಲವಾಗಿತ್ತು. ಆ ದಿನ ಸಂಜೆ ಹೆಂಡತಿಯ ಮತ್ತು ದಾಯಾದಿಯ ಜೊತೆಯಲ್ಲಿ ಗಾಳಿ ಸಂಚಾರ ಹೋಗಿ ಬಂದರು. ಊಟಕ್ಕೆ ಮುಂಚೆ ಕಾಗದಗಳನ್ನು ಬರೆಸಿದರು; ನಡೆಯಲಿದ್ದ ವಿಧವಾ ವಿವಾಹವೊಂದರ ಸಂಬಂಧವಾಗಿ ಮಾಡಬೇಕಾದ ವ್ಯವಸ್ಥೆಗಳನ್ನು ಭೇಟಿಕಾರರೊಡನೆ ಚರ್ಚಿಸಿದರು. ಊಟವಾದ ಮೇಲೆ ಅವರ ತಂಗಿ ಪ್ರಾರ್ಥನಾ ಸಮಾಜದ ಸ್ತೋತ್ರ ಗ್ರಂಥದಿಂದ ಕೆಲವು ಪದಗಳನ್ನು ಹಾಡಿದರು. ಆಮೇಲೆ ಜಸ್ಟಿನ್ ಮೆಕಾರ್ಥಿಯವರ (History of our own times) ಎಂಬ ಗ್ರಂಥವನ್ನು ಓದಲು ತೆಗೆದುಕೊಂಡರು. ಆ ಗ್ರಂಥವನ್ನು ಉಪನಿಷತ್ತುಗಳನ್ನು ಮಿಲ್ಮರ್‌ರ "ಕ್ರೈಸ್ತ ಧರ್ಮದ ಇತಿಹಾಸ" (History of Christianity) ಎಂಬ ಗ್ರಂಥವನ್ನೂ ಆಗ ವ್ಯಾಸಂಗಕ್ಕೆ ಇಟ್ಟುಕೊಂಡಿದ್ದರು. ಸ್ವಲ್ಪ

ಹೊತ್ತಿನಲ್ಲಿಯೆ ರಾತ್ರಿಯ ಹೃದಯವೇದನೆ ಆರಂಭವಾಯಿತು. ಈ ಬಾರಿ ನೋವು ಬಹು ತೀಕ್ಷ್ಣವಾಗಿತ್ತು. "ಈ ಬಗೆಯ ನೋವಿಗಿಂತಲೂ ಸಾವೇ ಲೇಸು" ಎಂದು ನುಡಿದರು. ಹತ್ತಿರದಲ್ಲಿದ್ದ ಡಾಕ್ಟರೊಬ್ಬರನ್ನು ಕರೆಸಲಾಯಿತು. ಅವರು ರೋಗ ಮನುಷ್ಯನ ಕೈಮಿಾರಿದೆಯೆಂದು ಹೇಳಿದರು. ಹೆಂಡತಿಯ ಭುಜದಲ್ಲಿ ತಲೆಯನ್ನು ವಿರಮಿಸಿದ್ದ ರಾನಡೆಯವರ ಪ್ರಾಣ ಕಾಲುಗಂಟೆಯ ಅವಧಿಯಲ್ಲಿ ಹಾರಿ ಹೋಯಿತು.

ಸಾವಿನ ಸುದ್ದಿ ತಿಳಿದ ಒಡನೆಯೆ ಶ್ರೀಮಂತರು ಬಡವರೆನ್ನದೆ, ಉಚ್ಚ ನೀಚವರ್ಗದ ಜನರೆನ್ನದೆ, ಸರ್ವರೂ ಮರಣದಿಂದಾದ ಅಪಾರ ನಷ್ಟದಿಂದ ವ್ಯಥೆಗೊಂಡರು. ನಾನಾ ಜಾತಿ ಮತಗಳ ಅಪಾರ ಜನ ಶವದ ಮೆರವಣಿಗೆಯಲ್ಲಿ ಸೇರಿ ರಾನಡೆಯವರಲ್ಲಿ ತಮಗಿದ್ದ ಗೌರವವನ್ನು ವ್ಯಕ್ತಪಡಿಸಿದರು. ಬೊಂಬಾಯಿನ ದಹನ ಘಾಟಿನಲ್ಲಿ ರಾನಡೆಯವರ ದೇಹವನ್ನು ವಿಧ್ಯುಕ್ತವಾಗಿ ಸುಡಲಾಯಿತು. ಅವರ ಬೂದಿಯನ್ನು ಅಲಹಾಬಾದಿನ ತ್ರಿವೇಣೀ ಸಂಗಮದಲ್ಲಿ ಸೇರಿಸಿದರು. ನೈಜ ದೇಶಾಭಿಮಾನಿಯೂ ಮಹಾ ಸಮಾಜ ಸುಧಾರಕನೂ ಆದ ಭಾರತದ ಸುಪುತ್ರನ ಜೀವವಿಂತು ಕೊನೆಗಂಡಿತು. ದೇಶದ ಬಿಡುಗಡೆಗಾಗಿ ಈ ದೇಶನಾಯಕರು ಆಶ್ಚರ್ಯಾವಹವಾದ ಕಾರ್ಯಗಳನ್ನು ಎಸಗದಿದ್ದಿರಬಹುದು; ಆದರೆ ತಮ್ಮ ಪ್ರಜ್ಞೆಯಿಂದಲೂ ಬಹು ಮುಖವಾದ, ಫಲಕಾರಿಯಾದ, ಚಟುವಟಿಕೆಗಳಿಂದಲೂ ಭಾರತದ ಸ್ವಾತಂತ್ರ್ಯ ವಿನ್ಯಾಸಕ್ಕೆ ಅಗತ್ಯವಾದ, ವಿಶಾಲವೂ ಆಳವೂ ಆದ ಅಸ್ತಿಭಾರವನ್ನು ಹಾಕಿದರು ಎನ್ನುವುದರಲ್ಲಿ ಸಂಶಯವಿಲ್ಲ.

---

